# ಸಿದ್ಧಗಂಗಾ

ಸಂಪುಟ–28. ಸಂಚಿಕೆ–2. ಫೆಬ್ರವರಿ–1992.




...ೀಯ ಪತ್ರಕರ್ತರ ೨೩ನೇ ಮಹಾಧಿವೇಶನ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಸಮ್ಮುಖದಲ್ಲಿ ಮುಖ್ಯಮಂತ್ರಿ ...ಸ್. ಬಂಗಾರಪ್ಪನವರು ತುಮಕೂರಿನಲ್ಲಿ ಉದ್ಘಾಟಿಸಿದರು. ಲೋ. ಸ. ಉಪಾಧ್ಯಕ್ಷ ಎಸ್. ಮಲ್ಲಿಕಾರ್ಜುನಯ್ಯ, ...ಶ್ರೀ ಟಿ.ಎಂ. ಮಂಜುನಾಥ್, ಒ.ಅಧ್ಯಕ್ಷ ಕೆ.ವಿಕ್ರಮ್‌ರಾವ್, ಪ.ಸಂ. ಅಧ್ಯಕ್ಷ ಎನ್.ಅರ್ಜುನ್‌ದೇವ್, ಕಾಣಬಹುದು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.



# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

## ಸಿದ್ಧಗಂಗಾಮಠ, ತುಮಕೂರು-ಜಿಲ್ಲೆ.

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1913ನೇ ಪ್ರಜೋತ್ಪತ್ತಿನಾಮ ಸಂವತ್ಸರದ

| | | | |
|---|---|---|---|
| ಮಾಘ ಬಹುಳ ಸಪ್ತಮಿ | ಸೋಮವಾರ | 24-2-1992 | ವೃಷಭವಾಹನ, ಗಜವಾಹನ. |
| ,, ,, ಅಷ್ಟಮಿ | ಮಂಗಳವಾರ | 25-2-1992 | ಹುಲಿವಾಹನ, ನಂದಿವಾಹನ. |
| ,, ,, ನವಮಿ | ಬುಧವಾರ | 26-2-1992 | ಹುತ್ತದವಾಹನ, ಅಶ್ವವಾಹನ. |
| ,, ,, ದಶಮಿ | ಗುರುವಾರ | 27-2-1992 | ಮುತ್ತಿನಪಾಲಕಿ ಉತ್ಸವ. |
| ,, ,, ದಶಮಿ | ಶುಕ್ರವಾರ | 28-2-1992 | ಸಿಂಹವಾಹನ, ರಾವಣವಾಹನ. |
| ,, ,, ಏಕಾದಶಿ | ಶನಿವಾರ | 29-2-1992 | ನವಿಲುವಾಹನ, ಶೇಷವಾಹನ. |
| ,, ,, ದ್ವಾದಶಿ | ಭಾನುವಾರ | 1-3-1992 | ಬಿಲ್ವವೃಕ್ಷವಾಹನ,<br>ನವರಂಗಪಾಲಕಿ ಉತ್ಸವ. |
| ,, ,, ತ್ರಯೋದಶಿ | ಸೋಮವಾರ | 2-3-1992 | ಮಹಾಶಿವರಾತ್ರಿ ಪೂಜಾದಿಗಳು,<br>ಮುತ್ತಿನಪಾಲಕಿ ಉತ್ಸವ. |
| ,, ,, ಚತುರ್ದಶಿ | ಮಂಗಳವಾರ | 3-3-1992 | ರ ಥೋ ೯ ತ್ಸ ವ<br>ರಥ ಹೊಸದಾಗಿ ಭವ್ಯವಾಗಿ ನಿರ್ಮಿಸಿದೆ. |
| ● ಅಮಾವಾಸ್ಯೆ | ಬುಧವಾರ | 4-3-1992 | ಬೆಳ್ಳಿಪಾಲಕಿ ಉತ್ಸವ. |
| ಫಾಲ್ಗುಣ ಶುದ್ಧ ಪ್ರಥಮ | ಗುರುವಾರ | 5-3-1992 | ತೆಪ್ಪೋತ್ಸವ, ಪಂಚಬ್ರಹ್ಮೋತ್ಸವ. |

ಮಾಮೂಲಿನಂತೆ 'ಎತ್ತಿನ ಪರಿಷೆಯು', "ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ" ನಡೆಯುವಂತೆ ಏರ್ಪಾಟು ಮಾಡಲಾಗಿದೆ.

ವಿ.ಸೂ. :— ಭಕ್ತಿ ಭಂಡಾರಿ, ಕಾಯಕ ರುವಾರಿ, ದೀನದಲಿತರ ಆಶಾಕಿರಣ

**ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ**

ಶ್ರೀ ಮಠದ ಕಲಾವಿದರು

25-2-1992 ಮಂಗಳವಾರ ಮತ್ತು

2-3-1992 ಸೋಮವಾರ "ಮಹಾಶಿವರಾತ್ರಿ" ಜಾಗರಣೆ

ಯಂದು ಅಭಿನಯಿಸುತ್ತಾರೆ.

ಸರ್ವರೂ ಸಕಾಲದಲ್ಲಿ ಎಲ್ಲಾ ಉತ್ಸವದಲ್ಲಿ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾಮಠ : ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಅಧ್ಯಕ್ಷರು.

# ಸಿದ್ಧಗಂಗಾ

ಸಂಪುಟ – 28. ಸಂಚಿಕೆ – 2. ಫೆಬ್ರವರಿ 1992.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಆನಂದ ನಿಧಿಗಿರಿಯೆ ಅರಿವಿನಸಿರಿಝರಿಯೆ
ಕಾಲಕರ್ಮವಗೆದ್ದ ಶ್ರೀಗುರುವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

†† †† ††

ಅವಧಾರು ನನ್ನತಂದೆ ತವಪದವ ಹಾಡುವೆನು
ಶಿವಬೆಳಕ ಚೆಲ್ಲಿರುವ ವರಗುರುವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

†† †† ††

ಬಸವಣ್ಣಗತಿಯೆಂದು ಮಡಿಹಾಸಿ ನಡೆದಿರುವೆ
ಹಸಗೆಟ್ಟ ಜನಪದವ ಕೈಹಿಡಿದು। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ.

# ಶ್ರೀ ವಾಣಿ



**ವಡೆಯ ಕಥೆ.**

ಒಬ್ಬ ರೈತನಿದ್ದ ಅವನಿಗೊಬ್ಬಳು ಹೆಂಡತಿಯಿದ್ದಳು. ಆಸೆಯ ಸ್ವಭಾವದ ಹೆಣ್ಣುಮಗಳು. ಆಹಾರದ ವಿಶೇಷವಾದ ಆಸೆ, ರುಚಿ ರುಚಿಯಾದುದನ್ನು ತಿನ್ನಬೇಕೆಂಬ ಹಂಬಲ. ತಿನ್ನುವ ಸಂದರ್ಭದಲ್ಲಿ ಇತರರನ್ನು ನೋಡುತ್ತಿರಲೇ ಇಲ್ಲ. ಎಷ್ಟು ತಿಂದರೂ ಇನ್ನೂ ತಿನ್ನಬೇಕೆಂಬ ಚಪಲ. ಒಮ್ಮೆ ರೈತನಿಗೆ ವಡೆ ತಿನ್ನಬೇಕೆಂಬ ಆಸೆಯಾಯಿತು. ಅದಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳನ್ನು ತಂದು ಕೊಟ್ಟು ಹೊಲಕ್ಕೆ ಹೋದ. ಸಂಜೆಗೆ ಬರುವ ವೇಳೆಗೆ ಊಟದ ಜೊತೆಗೆ ವಡೆ ಮಾಡಿಡಲು ಹೆಂಡತಿಗೆ ತಿಳಿಸಿ ಹೋದ. ಹೆಂಡತಿಗೆ ಎಲ್ಲಿಲ್ಲದ ಸಡಗರ ಬೇಗ ಬೇಗ ಬೇಳೆ ಇತ್ಯಾದಿಗಳನ್ನು ಹದವಾಗಿ ರುಬ್ಬಿದಳು, ಕಾಯಲು ಎಣ್ಣೆಯನ್ನು ಒಲೆಯ ಮೇಲಿಟ್ಟಳು, ಸರಿಯಾಗಿ ಒಲೆ ಉರಿಸಿದಳು. ಎಣ್ಣೆ ಕಾಯಿತು. ಹಾಳತವಾಗಿ ಸಿದ್ಧಮಾಡಿಟ್ಟುಕೊಂಡಿದ್ದ ವಡೆಯ ಹಸಿಹಿಟ್ಟನ್ನು ತಟ್ಟಿ ತಟ್ಟಿ ಎಣ್ಣೆಯಲ್ಲಿ ಹಾಕಿ ಕರಿಯಲು ಪ್ರಾರಂಭಿಸಿದಳು. ಘಮ್ಮೆನ್ನುವ ಕಂಪು ಹೊಮ್ಮಿತು. ಹೆಂಡತಿಯ ಬಾಯಲ್ಲಿ ನೀರೂರಿತು. ಬೇಯಿಸಿದ ಎರಡು ವಡೆಗಳನ್ನು ತಿಂದು ನೋಡಿದಳು ರುಚಿಯಾಗಿದ್ದವು. ವಡೆಗಳನ್ನು ಬೇಯಿಸುತ್ತ ಬೇಯಿಸುತ್ತ ಒಂದೊಂದನ್ನೇ ತಿನ್ನುತ್ತಾ ಹೋದಳು. ಸಂಜೆಯಾಯಿತು, ರೈತ ಹೊಲದಿಂದ ಮನೆಗೆ ಹಿಂದಿರುಗಿದ. ಅವನಿಗೂ ವಡೆತಿನ್ನಬೇಕೆಂಬ ಆಸೆ,

ಮನಸ್ಸೆಲ್ಲಾ ವಡೆಯ ಮೇಲೆಯೇ ವರ್ತಿಸುತ್ತಿತ್ತು. ಒಳಗೆ ಬರುತ್ತಿದ್ದಂತೆ ಹೆಂಡತಿಯನ್ನು "ವಡೆಮಾಡಿರುವೆಯಾ" ಎಂದು ಕೇಳಿದ. ವಡೆಯ ವಾಸನೆ ಬೇರೆ ಮನೆಯಲೆಲ್ಲಾ ಹರಡುತ್ತಿತ್ತು. ರೈತನ ಬಾಯಲ್ಲೂ ನೀರೂರಿತು. ಬೇಗ ಬೇಗ-ಕೈಕಾಲು ಮುಖ ತೊಳೆದುಕೊಂಡು ಬಂದು ಮಣೆ ಹಾಕಿಕೊಂಡು, ತಟ್ಟೆ ಇಟ್ಟುಕೊಂಡು ಊಟಕ್ಕೆ ಕುಳಿತೇ ಬಿಟ್ಟ. ಹೆಂಡತಿ ವಡೆಗಳನ್ನು ಎಣ್ಣೆಯಲ್ಲಿ ಕರಿಯುತ್ತಿದ್ದಳು. ಕಡೆಯದಾಗಿ ವಡೆಗಳನ್ನು ಎಣ್ಣೆಯಿಂದ ಹೊರಗೆ ತೆಗೆದಳು. ರೈತ ಇನ್ನೇನು ತನಗೆ ಕೊಡಬಹುದು ಎಂದು ನೋಡುತ್ತಿದ್ದ. ಅಷ್ಟರೊಳಗೆ ಹೆಂಡತಿ ವಡೆ ತುಂಬಾ ರುಚಿಯಾಗಿವೆ, ಸವಿಯಾಗಿವೆ, ಹಿತವಾಗಿವೆ ಎನ್ನುತ್ತ ಉಳಿದಿದ್ದ ಎರಡು ಮೂರು ವಡೆಗಳನ್ನು ತಿಂದು ಬಿಟ್ಟಳು, ಬಯಸಿ ಬಂದ ರೈತನಿಗೆ ಹೇಗಾಗಿರಬೇಕು !

ತನ್ನಂತೆ ಪರರು ಎಂಬುದನ್ನರಿಯದ ಆಸೆಬುರುಕ ಪ್ರವೃತ್ತಿ ಒಳ್ಳೆಯದಲ್ಲ. ಗಂಡನಿಗೇ ನೀಡದೆ ಮಾಡಿದೆಲ್ಲ ವಡೆಗಳನ್ನು ತಿಂದ ಹೆಂಡತಿಯಂತಾಗಬಾರದು. ಅದುಕೂಡಿ ಊಟ ಮಾಡೋಣ ಎಂಬ ತತ್ವಕ್ಕೆ ವಿರೋಧವಾದುದು, ನಮ್ಮದು "ಸಹನೌಭುನಕ್ತು" ಎಂಬ ಮನೋಧರ್ಮವಾಗಬೇಕು. ಹಂಚಿ ಊಟಮಾಡುವಲ್ಲಿ ಆನಂದವಿದೆ, ತೃಪ್ತಿಯಿದೆ. ಕಾಗೆಕೂಡ ತನ್ನ ಬಳಗವನ್ನೂ ಬಿಟ್ಟು ಊಟ ಮಾಡುವುದಿಲ್ಲ. ಕೋಳಿಕೂಡ ತನ್ನ ಮರಿಗಳನ್ನೂ ಬಿಟ್ಟು ಆಹಾರ ತಿನ್ನುವುದಿಲ್ಲ. ಸಹಬಾಳ್ವೆಯನ್ನು ಅನುಸರಿಸುತ್ತವೆ ಅವು "ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆಹತ್ತಿ ಉರಿದಡೆ ನಿಲಬಾರದು". ಭಕ್ತಿ ಶ್ರದ್ಧೆಗಳಿಂದ ಗಂಡನಿಗೆ ಮಾಡಿ ನೀಡ ಬೇಕಾದ ಹೆಂಡತಿಯೇ ಮಾಡಿದ ಎಲ್ಲ ವಡೆಗಳನ್ನು ತಿಂದು ಬಿಟ್ಟರೆ ಮಾಡು ವುದಾದರೂ ಏನು ? ಮನುಷ್ಯ ಮಾನವೀಯತೆಯನ್ನು ಕಳೆದು ಕೊಂಡರೆ ಉಳಿಯುವುದು ಮೃಗತ್ವ. ಹಾಗಾಗಬಾರದು.

# ಶ್ರೀ ಸಿದ್ಧಲಿಂಗೇಶ್ವರ ವಚನ



ಹಜಾರದ ಮನೆಯ ಪೀಠದಲ್ಲಿ
ಭಜಕ ಜನವರೇಣ್ಯನಿದಾನೆ ನೋಡಾ
ಕುಜನವಳಿದು ಸುಜನ ಜನಮುಖ ಸರೋಜ ರಾಜಹಂಸನೆಂಬಾತ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭು ತಾನೆ ಕಾಣಿರಾ

ಸಕಲ ಕ್ರಿಯೆಗಳಿಗೆ ಆಶ್ರಯವಾದ ಶರಣನ ಸ್ಥೂಲ ತನುವಿನ ಬಾಹ್ಯದ ಹೃದಯವೆಂಬ ಪೀಠದಲ್ಲಿ ಪೂಜಿಸಿದ ಆತ್ಮರುಗಳಿಗೆ, ಇಷ್ಟಾರ್ಥ ಸಿದ್ಧಿಯ ಕೊಡಲ್ಪಟ್ಟ ಪರಶಿವಲಿಂಗವೆ ಗುರುವಿನ ಉಪದೇಶದಿಂದ ಇಷ್ಟಲಿಂಗವಾಗಿ ನೆಲಸಿದೆ. ಸಕಲ ಕರಣಗಳ ವ್ಯಾಪಾರ ವಳಿದು, ಚಿತ್ಕರಣಗಳಿಂದ ಒಪ್ಪಲ್ಪಟ್ಟ ಶರಣನ ಸದ್ವಿವೇಕವೆಂಬ ಮುಖ ಕಮಲಮಧ್ಯದಲ್ಲಿ ರಾಜಹಂಸಾಯ ಮಾನವಾಗಿ ಒಪ್ಪುತ್ತಿರುವವನೇ ಪರಮಶಿವಲಿಂಗ ಎನ್ನುತ್ತದೆ ವಚನ.

ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## 61ನೇ ಕನ್ನಡ ಸಾಹಿತ್ಯ ಸಮ್ಮೇಳನ

ಅಖಿಲ ಭಾರತ 61ನೆ ಕನ್ನಡ ಸಾಹಿತ್ಯ ಸಮ್ಮೇಳನ ದಿ॥ ಜನವರಿ 9. 10, 11, 12, ರಂದು ದಾವಣಗೆರೆಯಲ್ಲಿ ನಡೆಯಿತು. ವ್ಯವಸ್ಥಿತವಾಗಿ ನಡೆಯಿತು. ವಾಣಿಜ್ಯ ನಗರಿಯಲ್ಲಿ ಸಾಹಿತ್ಯ ಸೌರಭ ಘಮ ಘಮಿಸಿತು. ಸ್ವಾಗತ ಸಮಿತಿಯವರ ಉತ್ಸಾಹ ಆಸಕ್ತಿ ಶ್ರದ್ಧೆಗಳು ಎದ್ದು ಕಾಣುವಂತಿತ್ತು ಸಮ್ಮೇಳನದ ವ್ಯವಸ್ಥೆ. ಕನ್ನಡ ಸಾಹಿತ್ಯ ಪರಿಷತ್ತಿನ ದೂರದೃಷ್ಟಿ, ವಿವೇಚನಾಪರವಾದ ಗೋಷ್ಠಿಗಳ ನಿಯೋಜನೆ, ವಿವಿಧ ಗೋಷ್ಠಿಗಳ ಅಧ್ಯಕ್ಷರ ಆಯ್ಕೆ, ಪ್ರಬಂಧ ಮಂಡಿಸಿದವರ ಆಯ್ಕೆ ವಿಷಯಗಳ ಪ್ರಸ್ತುತತೆ, ನಿರ್ಣಯಗಳ ಅಂಗೀಕಾರ, ಸ್ವಾಗತ ಸಮಿತಿಯವರೊಂದಿಗೆ ನೀಡಿದ ಸಹಕಾರ-ಎಲ್ಲವೂ ಪ್ರತಿನಿಧಿಗಳ, ಕನ್ನಡಾಭಿಮಾನಿಗಳ ಮೆಚ್ಚುಗೆಗೆ ಪಾತ್ರವಾಯಿತು. ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯನವರ, ಕಾರ್ಯದರ್ಶಿಗಳಾದ ಶ್ರೀ ಗೊ. ರು. ಚನ್ನಬಸಪ್ಪನವರ ಮತ್ತು ಅವರ ಸಿಬ್ಬಂದಿಯವರ ಬಿಡುವಿಲ್ಲದ ದುಡಿಮೆ, ಮತ್ತು ಅಭಿಮಾನಗಳು ಸಮ್ಮೇಳನದ ಎಲ್ಲ ಗೋಷ್ಠಿಗಳೂ ಯಶಸ್ವಿಯಾಗಿ ನಡೆಯಲು ಸಹಕಾರಿಯಾದುವು. ಸ್ವಾಗತ ಸಮಿತಿಯವರಂತೂ ತಮ್ಮ ಮನೆ ಕೆಲಸವೆಂಬಂತೆ ಸೇವಾಮನೋಭಾವದಿಂದ ಆತಿಥ್ಯನೀಡಿದರು. ಊಟದ ವ್ಯವಸ್ಥೆ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರ ಸಿಬ್ಬಂದಿಯವರದಾಗಿತ್ತು. ಎಲ್ಲರ ಪ್ರೀತಿಗೆ ಪಾತ್ರವಾಯಿತು. ಸಮ್ಮೇಳನದ ಭವ್ಯ ಸಭಾಮಂಟಪ, ವೇದಿಕೆ, ಮಹಾದ್ವಾರ, ಬೆಳಕಿನ, ಧ್ವನಿಯ ವ್ಯವಸ್ಥೆ ಅನುಕರಣೀಯವೆನಿಸಿತು. ಪುಸ್ತಕ ಪ್ರದರ್ಶನವೇ ಒಂದು ಬೃಹತ್ ಸಮ್ಮೇಳನದಂತಿದ್ದುದು ವಿಶೇಷ. ನೂರಮೂವತ್ತೊಂದು ಪುಸ್ತಕಮಳಿಗೆಗಳು ಬಂದಿದ್ದವು. ಪುಸ್ತಕ ಮಳಿಗೆಗಳ ತುಂಬಾ ಜನ, ಸಾಹಿತ್ಯಾಸಕ್ತರ ಗ್ರಂಥಗಳ ಆಯ್ಕೆ ವ್ಯಾಪಾರ ನಡೆಯಿತು. ಸಾಂಸ್ಕೃತಿಕ ಕಾರ್ಯಕ್ರಮಗಳ ರಸದೂಟ ದಾವಣಗೆರೆಯ ಜನತೆಗೆ ಲಭ್ಯವಾಯಿತು.

ಸಾಹಿತ್ಯ ಸಂವಾದವೆಂಬ ಹೊಸಯೋಜನೆಯೊಂದು ಸಾಹಿತ್ಯ ಸಮ್ಮೇಳನದಲ್ಲಿ 60ನೆಯ ಸಾಹಿತ್ಯ ಸಮ್ಮೇಳನ ಮೈಸೂರಿನಲ್ಲಿ ನಡೆದಾಗ ಪ್ರಾರಂಭವಾಯಿತು. ದಾವಣಗೆರೆಯಲ್ಲಿ ಮುಂದುವರಿಯಿತು. ಶೀರಗಂಭೀರವಾದ ಚರ್ಚೆಗೆ ಅವಕಾಶ ಕಲ್ಪಿಸಿಕೊಟ್ಟ ನೂತನ ಪ್ರಯತ್ನ. ಹೆಚ್ಚು ಚಿಂತನಶೀಲ ಮನಸ್ಸುಗಳು ಸಾಹಿತ್ಯದ ಸ್ಥಿತಿಗತಿ, ಸಮಾಜಕ್ಕೆ ಅದರಿಂದಾಗುವ ಪ್ರಯೋಜನ, ಬದುಕಿನ ಅನ್ವೇಷಣೆಗಳನ್ನು ಕುರಿತು ಮುಕ್ತವಾಗಿ ಪರಸ್ಪರ ಸಂವಾದ ನಡೆಸುವಂತಾದುದು ಔಚಿತ್ಯ ಪೂರ್ಣವಾಯಿತು.

ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಜಿ. ಎಸ್. ಶಿವರುದ್ರಪ್ಪನವರು ಎಲ್ಲ ಗೋಷ್ಠಿಗಳಲ್ಲಿ ಹಾಜರಿದ್ದು ಶೋಭೆ ತಂದರು. ಅವರ ಆಯ್ಕೆಯಂತು ನಾಡಿನುದ್ದ

ಗಲಕ್ಕೂ ಸ್ವಾಗತಾರ್ಹವಾಯಿತು. ಅತ್ಯಂತಯೋಗ್ಯವಾದ ಆಯ್ಕೆ ಎಂದೇ ಸಾಹಿತ್ಯ ಸಮ್ಮೇಳನದ ಇತಿಹಾಸವನ್ನೂ ಬಲ್ಲವರ ಸೊಲ್ಲಾಯಿತು. ಒಂದೇ ಒಂದು ವಾಕ್ಯವೂ ಜಿ. ಎಸ್. ಎಸ್. ರವರ ಆಯ್ಕೆಯನ್ನು ಕುರಿತಾಗಿ ಅಸಂತೋಷ ಅಥವಾ ಭಿನ್ನಾಭಿಪ್ರಾಯವಾಗಿ ಎಲ್ಲೂ ಯಾವ ಪತ್ರಿಕೆಯಲ್ಲೂ ಪ್ರಕಟವಾಗಲಿಲ್ಲ. ಅಷ್ಟು ಯೋಗ್ಯವಾದ ಆಯ್ಕೆ ಜಿ. ಎಸ್. ಎಸ್. ರವರದಾಯಿತು. ಕವಿಯಾಗಿ, ವಿಮರ್ಶಕರಾಗಿ, ಪ್ರಾಧ್ಯಾಪಕರಾಗಿ, ಒಳ್ಳೆಯ ಗುರುವಿನ ಒಳ್ಳೆಯ ಶಿಷ್ಯರಾಗಿ ಬೆಳೆದು ಬಂದವರು ಶಿವರುದ್ರಪ್ಪನವರು. ನಾಡಿಗೆ, ನುಡಿಗೆ ಗಣನೀಯ ಸೇವೆಸಲ್ಲಿಸಿ ಕೃತಾರ್ಥರಾದವರು ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರಸಾಹಿತ್ಯ ಅಕಾಡೆಮಿಗಳಿಂದ ಪ್ರಶಸ್ತಿ ವಿಜೇತರು ರಾಜ್ಯ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಸ್ತುತ್ಯಾರ್ಹಸೇವೆ ಸಲ್ಲಿಸಿದವರು. ಸಹಸ್ರಾರು ವಿದ್ಯಾರ್ಥಿಗಳನ್ನು ರೂಪಿಸಿದವರು. ಬರಹಗಾರರನ್ನು ಬೆನ್ನು ತಟ್ಟಿ ಮುಂದೆ ತಂದವರು. ಪ್ರಾಧ್ಯಾಪಕ ಸ್ಥಾನಕ್ಕೆ ಗೌರವ ಘನತೆಗಳನ್ನೂ ಉಳಿಸಿ ಕೊಟ್ಟವರು. ಎಲ್ಲಕ್ಕೂ ಹೆಚ್ಚಿನದಾಗಿ ಶ್ರೇಷ್ಠ ಕೃತಿಗಳನ್ನು ಕೊಟ್ಟ ಕೀರ್ತಿಅವರದು. 'ಸಾಮಗಾನ'ದಿಂದ ಮೊದಲಾದ ಜಿ.ಎಸ್.ಎಸ್. ರವರ ಕಾವ್ಯ ಕೃಷಿನಿರಂತರವಾಗಿ ಸಾಗಿ ಬಂದಿದೆ 'ಸಮಗ್ರ ಕಾವ್ಯ' ದವರೆಗೆ ಅವರ 'ಕಾವ್ಯಾರ್ಥಚಿಂತನ' ಭಾರತೀಯ ಕಾವ್ಯಮೀಮಾಂಸೆಯ ದಾರಿಯಲ್ಲಿ ಕಾಣಿಸಿಕೊಂಡು ಮಹತ್ವದ ಗ್ರಂಥ, ಬೆಳಕಿನಸ್ತಂಬ ಜೀವನ ಪ್ರೀತಿಯನ್ನು ಬಿತ್ತಿ ಬೆಳೆದ ಜಿ.ಎಸ್.ಎಸ್. ರವರು ಸಾಹಿತ್ಯ ಕೃತಿಯ ಮೂಲಕ ಬದುಕಿನ ಪ್ರೀತಿಯ ಹಲವಾರು ಮುಖಗಳನ್ನು "ಅನಾವರಣ" ಮಾಡಿದ್ದಾರೆ. ದೀಪದಹೆಜ್ಜೆಯನ್ನು ಮಾಡಿಸಿದ್ದಾರೆ. ಅದನ್ನು ಗಮನಿಸಿದನಾಡು ಶಿವರುದ್ರಪ್ಪನವರಿಗೆ ಸ್ನೇಹ ಕಾರ್ತಿಕವನ್ನು ಅಭಿನಂದನ ಗ್ರಂಥವನ್ನು ಅರ್ಪಿಸಿ ಸಂತೋಷಗೊಂಡಿದೆ.

ಡಾ|| ಜಿ. ಎಸ್. ಶಿವರುದ್ರಪ್ಪನವರು ಸಮ್ಮೇಳನದ ಅಧ್ಯಕ್ಷ ಭಾಷಣವನ್ನು ಸಮಗ್ರದೃಷ್ಟಿಯಿಂದ-ನಾಡು-ನುಡಿಗೆ ಸಂಬಂಧಿಸಿದಂತೆ ಮಾಡಿದರು. ಕಾವೇರಿ ಜಲ ವಿವಾದವನ್ನೂ ಪ್ರಸ್ತಾಪಿಸಿದರು. ಅಭಿಮಾನವನ್ನು ಎಚ್ಚರಿಸಿದರು. ಕನ್ನಡ ತನವನ್ನೂ ಬೆಳೆಸಿಕೊಳ್ಳುವ ಅಗತ್ಯತೆಯನ್ನು ಒತ್ತಿ ಹೇಳಿದರು. ತಾವು ಬೆಳೆದು ಬರಲು ಸಹಾಯಕವಾದಯಾವೊಂದು ಶಕ್ತಿಯನ್ನು ಅವರು ಮರೆಯಲಿಲ್ಲ, ಕೃತಜ್ಞತೆಯನ್ನೂ ವ್ಯಕ್ತಪಡಿಸಿದರು. ದಾವಣಗೆರೆಯೊಂದಿಗೆ ತಮ್ಮ ಸಂಬಂಧವನ್ನು ನೆನಪಿಸಿಕೊಂಡು ಸಂತೋಷಿಸಿದರು. ಸ್ವಾಗತ ಸಮಿತಿಯವರ ಆತಿಥ್ಯವನ್ನೂ ಹೃದಯ ತುಂಬಿ ಪ್ರಶಂಸಿಸಿದರು. ಪತ್ರಿಕೆಗಳ ತುಂಬ ನಾಲ್ಕುದಿನ ಸಾಹಿತ್ಯ ಸಮ್ಮೇಳನಾಧ್ಯಕ್ಷರ ವಿಚಾರಗಳೇ ಪ್ರಕಟವಾದವು. ಆದರೆ ದೂರದರ್ಶನದವರು ಸಮ್ಮೇಳನಾಧ್ಯಕ್ಷರ ಸಂದರ್ಶನವನ್ನು ಏರ್ಪಡಿಸದೇ ಹೋದುದು ವಿಸ್ಮಯವೆನಿಸಿತು. ಡಾ|| ಜಿ. ಎಸ್ ಶಿವರುದ್ರಪ್ಪನವರ "ಎನಿತು ಜನ್ಮದಲಿ ಎನಿತು ಜೀವರಿಗೆ ಎನಿತು ಋಣಿಯೋ ನಾವು ತಿಳಿದು ನೋಡಿದರೆ ಬಾಳು ಎಂಬುದಿದು ಋಣದ ರತ್ನ ಗಣಿಯೋ" ಎಂಬ ಮಾತಿನಂತೆ ಸಾಹಿತ್ಯ ಸಮ್ಮೇಳನ ಯಶಸ್ಸಿಗೆ ದುಡಿದ ಎಲ್ಲರಿಗೂ ನಾಡು ಋಣಿ ಎನಬೇಕು.

## ವಚನ ಸಾಹಿತ್ಯದ ಘನತೆ (ಮುಂದುವರಿದಿದೆ)

ಡಾ|| ಎಲ್. ಆರ್. ಹೆಗಡೆ, ಸಿದ್ದಾಪುರ, ಉತ್ತರಕನ್ನಡ ಜಿಲ್ಲೆ.

ಕಷ್ಟಪಡದೆಯೇ ದುಷ್ಟತನದಿಂದ ಸಿರಿವಂತರಾಗಿ ಸಕಲ ಭೋಗ ಭಾಗ್ಯಗಳನ್ನು ಅನುಭವಿಸಬೇಕೆಂಬವರು ಹೆಚ್ಚಾಗಿರುವುದರಿಂದ ರಾಷ್ಟ್ರವು ದುರ್ದೆಶೆಗೆ ಈಡಾಗುತ್ತದೆ. ೧೨ನೆಯ ಶತಮಾನದಲ್ಲೂ ಸಹ ಇಂಥಜನರಿದ್ದರು. ಕಾಯಕ ತತ್ವಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ. ಕಷ್ಟಮಾಡಿ ದುಡಿದು ಅರ್ಪಿಸಿದುದನ್ನೇ ಶಿವನು ಒಲಿಯುತ್ತಾನೆ ಎಂದು ಹೇಳಿ ಸ್ವಾವಲಂಬನದಿಂದ ಜೀವಿಸಬೇಕೆಂಬುದನ್ನು ಒತ್ತಿ ಹೇಳಿದರು. ತನ್ನ ದುಡಿತದ ಒಂದು ಭಾಗವನ್ನು ಧರ್ಮ ಮತ್ತು ಸಮಾಜ ಸೇವೆಗೆ ಉಪಯೋಗಿಸಬೇಕೆಂದು ತಿಳಿಸಿದರು. ಕಾಯಕವೇ ಕೈಲಾಸ ಎಂಬ ಮಹಾವಾಕ್ಯದಿಂದ ಬಸವಣ್ಣನವರು ಕಾಯಕ ಅಂದರೆ ಕಾರ್ಯದಿಂದ ಮಾಡುವ ಕರ್ಮ ಎಂಬುದನ್ನು ಬಹು ಮೇಲ್ಮಟ್ಟಕ್ಕೆ ಏರಿಸಿ, ಆ ಶಬ್ದಕ್ಕೆ ಹೆಚ್ಚಿನ ಅರ್ಥಗೌರವವನ್ನು ನೀಡಿದರು.

WORK IS WORSHIP ಎಂದು ಬಸವಣ್ಣನವರಿಗಿಂತ ಏಳು ಶತಮಾನಗಳ ಮೇಲೆ ಕಾರ್ಲ್‌ಯಿಲ್ ಹೇಳಿದನು. ಇಲ್ಲಿ WORK ಎಂಬುದಕ್ಕೆ ಕಾಯಕ ಎಂದು ಭಾಷಾಂತರಿಸಲಾಗದು ಕರ್ಮ (ಪರಿಶ್ರಮವು) ಈಶಪೂಜೆ ಎಂದಿಷ್ಟೇ ಇದರ ಅರ್ಥ ಏಕೆಂದರೆ, ಕಾಯಕ ಎಂಬ ಶಬ್ದವು ಸಾಮಾನ್ಯ ಪರಿಶ್ರಮ ಎಂಬುದಕ್ಕಿಂತಲೂ ಕರ್ಮಯೋಗ ಎಂಬ ಅರ್ಥವನ್ನು ಒಳಗೊಂಡು, ಸಮರ್ಪಣ ಭಾವವನ್ನು ವ್ಯಂಜಿಸುತ್ತದೆ. "ಯೋಗ: ಕರ್ಮಸು ಕೌಶಲಂ" ಎಂಬ ಭಗವದ್ಗೀತೆಯ ವಾಕ್ಯವನ್ನು ಕರ್ಮ ಮಾಡಿಯೂ ಅದು ಅಂಟದಂತೆ ಕರ್ಮ ಮಾಡುವ ಕೌಶಲ್ಯ ಎಂದು ವಿವರಿಸಬಹುದು.

"ಕರ್ಮಮಾಡುವುದರಲ್ಲಿ ಕರ್ಮದಿಂದ ಬಂಧನವಾಗದಂತೆ ಕರ್ಮಮಾಡುವ ಕೌಶಲ್ಯವು" x ಎಂದು ಜಸ್ಟಿಸ್ ಟಿ. ಎನ್. ಮಲ್ಲಪ್ಪ ಅವರು ವಚನ ವಾಙ್ಮಯದ ಹಿನ್ನೆಲೆ ಎಂಬ ಲೇಖನದಲ್ಲಿ ವಿವರಿಸಿರುತ್ತಾರೆ. (ವಚನ ಪಿತಾಮಹ ಗ್ರಂಥ.ಪುಟ ೧೮೮)

ಅಣುವಿನಲ್ಲಿ ಮಹತ್ತತ್ವವನ್ನು ಒಳಗುಗೊಳಿಸಿ ಸೂತ್ರರೂಪವಾಗಿ ರಚಿಸಿರುವುದರಲ್ಲಿ ವಚನವಾಙ್ಮಯದ ಹಿರಿಮೆಯು ಅಡಕವಾಗಿದೆ. ಒಂದೊಂದು ವಾಕ್ಯವನ್ನು ವಿವರಿಸಲು ಒಂದೊಂದುಗ್ರಂಥವೇ ಬೇಕಾದೀತು. ಇಂಗ್ಲೀಷ್ ಅನುಭಾವಿ ಕವಿ ಬ್ಲೇಕ್‌ಬರೆದ, ಪ್ರಖ್ಯಾತನಾದ.

To see the world in a grain of sand
And a heaven in a wild flower
and Infinity in the palm of your hand
And eternity in an hour ?

ಮಣ್ಣಿನ ಕಣದಲಿ ವಿಶ್ವವ ಕಾಣಲು
ವನ ಸುಮದಲಿ ಇಹಸ್ವರ್ಗವ ತೋರಲು
ಅಂಗೈಯಲಿ ನಿಃಸೀಮವ ಹಿಡಿಯಲು
ಅನಾದ್ಯನಂತವ ಗಂಟೆಯೊಳಿರುಕಿಸಿ

ಎಂಬ ಕವಿತೆಯ ಮೊದಲನೆಯ ಸಾಲಿನಲ್ಲಿ ವೈಜ್ಞಾನಿಕ ಅರ್ಥವನ್ನು ಹೊರಡಿಸಬಹುದು. ವಚನಕಾರರ ಒಂದು ಶಬ್ದದಲ್ಲಿ ವಾಕ್ಯದ ಸಾಲಿನಲ್ಲಿ ವಿಜ್ಞಾನವನ್ನು ಮೀರಿ ಅದಕ್ಕೆ ಸವಾಲಾಗಿರುವ ಶಬ್ದಬ್ರಹ್ಮವನ್ನು ಧೇನಿಸಬಹುದು.

ಕಿರಿದರೊಳು ಪಿರಿದುಮರ್ಥವ
ನರಿಪಲ್ ಬಲ್ಲಾತನೆಲ್ಲರಿಂದಂ ಬಲ್ಲಂ ॥

ಎಂಬ ಕವಿರಾಜಮಾರ್ಗಕಾರನ ಅಭಿಮತದಂತೆ ವಚನಕಾರರ ವಾಕ್ಯಗಳ ಅರ್ಥಪ್ರಪಂಚವು ಬಹಳ ವಿಸ್ತಾರವೂ ಆಳವೂ ಆಗಿರುವುದು.

ವಚನಕಾರರು ತಮ್ಮ ಅಭಿಪ್ರಾಯಗಳಿಗೆ ಸಂಸ್ಕೃತ ಶ್ಲೋಕಗಳನ್ನು ಆಧಾರವಾಗಿ ಕೊಟ್ಟಿರುವುದುಂಟು. ಕೊಟ್ಟಿರದಿರುವಲ್ಲಿ ಸಹ, ಇದು ಉಪನಿಷತ್ತಿನ ವಾಕ್ಯಗಳ ಅಭಿಪ್ರಾಯದ ಅನುವಾದ ಎಂದೂ ಛಾಯೆ ಎಂದೂ ಹೇಳಬಹುದಾದ ವಚನಗಳುಂಟು.

ಕಠೋಪನಿಷತ್ತಿನ ಅಣೋರಣೀಯಾನ್ ಮಹತೋಮಹೀಯಾನ್ ಎಂಬ ವಾಕ್ಯದ ಭಾವನೆಯನ್ನೇ ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು ಎಂದು ಬಸವಣ್ಣನವರು ಅನುವಾದಿಸಿರುವುದನ್ನು ತೋರಿಸಿದ್ದಾರೆ. ಶ್ರೀ ಸಣ್ಣನಂಜೇಗೌಡರು.

ಆದರೆ, ಸಂಸ್ಕೃತದ ಪ್ರಭಾವವಿದ್ದರೂ ಕನ್ನಡ ತನ್ನ ತನವನ್ನು ಕಳೆದುಕೊಂಡಿಲ್ಲ. ಎಂದು ಒಪ್ಪಿ ಡಾ. ರಂ. ಶ್ರೀ. ಮುಗಳಿಯವರ ಅಭಿಪ್ರಾಯವನ್ನು ಉದ್ಧರಿಸಿದ ಸಣ್ಣನಂಜೇಗೌಡರು

---

೨೧ ಅಂಗೈಯಲ್ಲಿ ನಿಃಸೀಮವ ಹಿಡಿವುದೇ ಇಷ್ಟಲಿಂಗಕ್ಕೆ ಹೊಂದುತ್ತದೆ.
ಕರ್ನಾಟಕ ಭಾರತಿ (ನವಂಬರ್ ೧೯೭೮ ಪುಟ ೮೦)

ಉದಕದೊಳಗೆ ಬೈಚಿಟ್ಟ ಬೈಕೆಯ ಕಿಚ್ಚಂತೆ ಇದ್ದಿತ್ತು
ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು
ನನೆಯೊಳಗಣ ಪರಿಮಳದಂತೆ ಇದ್ದಿತ್ತು
ಕೂಡಲ ಸಂಗಮದೇವರ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು

ಎಂಬ ಬಹುಅರ್ಥಗರ್ಭಿತವಾದ, ಮನೋಹರವಾದ ವಚನವನ್ನು 'ತಿಲೇಷು ತೈಲಂ.... ಎಂದು ಪ್ರಾರಂಭವಾಗುವ ಶ್ವೇತಾಶ್ವತರೋಪನಿಷತ್ತಿನ (ಶ್ಲೋಕಗಳ) ಅನುವಾದವೇ ಆಗಿದೆ ಎಂದು ಬರೆದಿರುವುದು ಆಶ್ಚರ್ಯಕರವಾಗಿದೆ.

ಇದರಲ್ಲಿ ಆಪಃ ಸ್ರೋತಸು ಅರಣೀಷು ಚಾಗ್ನಿ: ನೀರಿನ ಪ್ರವಾಹದಲ್ಲಿ (ಹಾಗೂ) ಅರಣಿಯಲ್ಲಿ (ನರುವಲದ ಕಟ್ಟಿಗೆಯಲ್ಲಿ) ಇರುವ ಅಗ್ನಿ(ಯಂತೆ) ಎಂಬಲ್ಲಿನ ಭಾವವಿದ್ದರೂ ಇದು ಅನುವಾದವಲ್ಲ. ಮೇಲಿನ ಮುಂದಿನ 3 ವಾಕ್ಯಗಳ ಸೊಗಸು ಮೇಲೆ ತಿಳಿಸಿದ ಶ್ಲೋಕದ್ದಲ್ಲ,

ಕೂಡಲ ಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು ಎಂಬ ಭಾವವು ಅತ್ಯಂತ ರಮಣೀಯವಾದ ರೂಪದಲ್ಲಿದ್ದು, ಚೇತೋಹಾರಿಯಾಗಿದೆ.

ಸ್ವತ: ಉತ್ತಮ ವಚನಕಾರ್ತಿಯಾದ ನೂತನ ಶಿವಶರಣೆ ಮಾತೆ ಮಹಾದೇವಿಯವರು ಬಸವತತ್ವದರ್ಶನ ಎಂಬ ಮಹತ್ವದ ಬೃಹತ್ ಗ್ರಂಥದಲ್ಲಿ ಸೃಷ್ಟಿ ಪರಮಾತ್ಮ ಗರ್ಭದಲ್ಲಿ ಹೇಗೆ ಇತ್ತು ಎಂಬುದನ್ನು ವಿವರಿಸುವ ವಚನವನ್ನು ಪರಿಭಾವಿಸಿರಿ-

ಕನ್ನೆಯೊಳಗಣ ಕಾಮದಂತಿರ್ದಿತಯ್ಯಾ ವಿಕಾಸವಾಗದೊಲು
ದೀಪದೊಳಗಣ ದೀಪ್ತಿಯೊಲಿರ್ದಿತಯ್ಯಾ ಹೊರ ಹೊಮ್ಮದೊಲು
ಬಾಲೆಯೊಳಗಣ ಶಿಶುವಿನಂತಿರ್ದಿತಯ್ಯಾ ಸೃಷ್ಟಿ ತವಗರ್ಭದಲಿ

ಎಂಬ ವಚನದಲ್ಲಿ ಸುಂದರವಾಗಿ ಹೇಳಿದ ಭಾವದ ೧ ನೆಯ ಸಾಲು ಬಸವಣ್ಣನವರ ಮೇಲಿನ ವಾಕ್ಯದ ವಿವರಣದಂತಿರುವುದಾಗಿ ಮೆಚ್ಚತಕ್ಕದ್ದಾಗಿದ್ದರೂ ಕನ್ನೆಯ ಸ್ನೇಹದಂತಿದ್ದಿತ್ತು ಎಂಬ ವಾಕ್ಯದ ಹಿರಿಮೆಯನ್ನು ಸರಿಗಟ್ಟಲಾರದು. ಬಸವಣ್ಣನವರ ಮೂಲ ವಚನದಲ್ಲಿ ಸ್ನೇಹ ಎಂಬ ಶಬ್ದವು ನೇಹದಂತಿದ್ದಿತ್ತು ಎಂದು ಇದ್ದಿತೇ ಎಂಬ ಸಂದೇಹ ನನಗೆ ಬಂದಿದೆ.

ಏಕೆಂದರೆ ಋಣ ಎಂಬುದನ್ನು ರಿಣ ಎಂದು ಬರೆದಿರುವ ಹಾಗೆ ಸ್ನೇಹವನ್ನು ನೇಹವೆಂದೇ ಬರೆದಿದ್ದರೆ ಹೆಚ್ಚಿನ ಆತ್ಮೀಯತೆಯು ಒತ್ತು ಬರುತ್ತಿತ್ತು.

ಸ್ನೇಹ ಎಂದೇ ಇದ್ದರೂ ಕಾಮ ಎಂಬ ಶಬ್ದಕ್ಕಿಂತಲೂ ಹೆಚ್ಚಿನ ಅರ್ಥವ್ಯುತ್ಪತ್ತಿ ಅದರಲ್ಲಿ ಸೇರಿದೆ. ಆದರೆ ಶ್ರೀಮಾತೆಯವರು ಸೂಚಿಸಿರುವ ಸಂದರ್ಭಕ್ಕೆ ಅವರು ಕೊಟ್ಟ ವಚನದ ಶಬ್ದಪ್ರಯೋಗ ಸಮಂಜಸವೇ ಆಗಿದೆ.

---

ಬಸವತತ್ವದರ್ಶನ, ಪುಟ ೧೩೭, ಸುಯಿಧಾನ ಗ್ರಂಥಮಾಲೆ, ಧಾರವಾಡ

ಶ್ರೀ ಟಿ. ಎನ್. ಮಲ್ಲಪ್ಪನವರು ನಾಸದೀಯ ಸೂಕ್ತದಲ್ಲಿ ಜಗತ್ಕಾರಣವನ್ನು 'ಆಭು' ಎಂಬ ಪದದಿಂದ ಮಾಡಲಾಯಿತೆಂದೂ ಪೊಳ್ಳುಎಂಬ ಅರ್ಥವುಳ್ಳ ಆಭು ಪದವು ವೀರಶೈವರ ಬಯಲು, ನಿರ್ವಯಲು ಶೂನ್ಯ ಮೊದಲಾದ ಪಾರಿಭಾಷಿಕ ಶಬ್ದಗಳಂತೆ ಅವ್ಯಕ್ತವಾದುದನ್ನು ಸೂಚಿಸಲು ಉಪಯೋಗಿಸಲ್ಪಟ್ಟಿದೆ ಎಂದುಬರೆದಿರುವರು.

ಇಂಗ್ಲೀಷ್‌ನಲ್ಲಿ Null and void ಎಂಬ ಶಬ್ದಗಳ ಉಪಯೋಗ ಮಾಡಲಾಗುತ್ತದೆ.

'ಬಯಲು ನಿರ್ವಯಲು' ಹಾಗೂ ಶೂನ್ಯ ನಿಃಶೂನ್ಯ ಎಂದು ವಚನಕಾರರು ಬಳಸಿದ ಅರ್ಥಕ್ಕೆ ಮೇಲಿನ ಇಂಗ್ಲಿಷ್ ಶಬ್ದಗಳ ಜೋಡಿಯು ಹೊಂದುವುದಿಲ್ಲ. ಏಕೆಂದರೆ, ಈ ಬಯಲು ನಿರ್ವಯಲು ಶಬ್ದಗಳು ಕೇವಲ ಚೈತನ್ಯವೇ ತಾನೇ ತಾನಾಗಿ ನಿರಾಕಾರ ಸ್ವರೂಪದಲ್ಲಿರುವುದನ್ನು ಸೂಚಿಸುತ್ತವೆ. "ಆಕಾಶ' ಎಂಬ ಶಬ್ದವೊಂದೇ ಈ ಅರ್ಥವನ್ನು ಹೊತ್ತಿರುವ ಸಂಸ್ಕೃತ ಶಬ್ದವಾಗಿ ಇಂದಿಗೂ ವ್ಯವಹೃತವಾಗಿರುತ್ತದೆ.

ಈ ಮಹತ್ತತ್ತ್ವವನ್ನು ಅಚ್ಚಕನ್ನಡದ ಬಯಲು ಎಂಬ ಶಬ್ದದಿಂದ ಸೂಚಿಸಿರುವುದು ವಿಶೇಷ ಉಲ್ಲೇಖನೀಯವಾಗಿದೆ. ಬಯಲು ಎಂಬ ಶಬ್ದದ ಮೂಲ ಕ್ರಿಯಾಪದವು ಬಯ್ ಅಂದರೆ, ಅಡಗು, ಎಂಬ ಅರ್ಥದಲ್ಲಿದೆ. ಬಯ್ತಿಡು, ಬಚ್ಚಿಡು ಅಂದರೆ, ಅಡಗಿಸು, ಅಡಗುವಂತೆ ಇಡು ಎಂಬುದಾಗಿದೆ.

ವ್ಯಕ್ತವಾದ ಪ್ರಪಂಚವು ಆ ನಿರಾಕಾರ ಚೈತನ್ಯದಲ್ಲಿ ಅಡಗಿ ಇತ್ತು ಎಂಬುದೇ ಈ ಪುಟ್ಟ ಶಬ್ದದಲ್ಲಿ ಅಡಗಿರುವ ಶ್ರೇಷ್ಠ ರಹಸ್ಯವಾಗಿದೆ.

ವೀರಶೈವ ತತ್ತ್ವದರ್ಶನವು ಮೊಹೆಂಜೊದಾರೋ ಕಾಲದಷ್ಟು, ಋಗ್ವೇದ ಕಾಲದಷ್ಟು ತೀರ ಪ್ರಾಚೀನವೆಂಬ ಅಭಿಪ್ರಾಯವಿದೆ. ಅದೇನೇ ಇದ್ದರೂ ವಚನ ಸಾಹಿತ್ಯದಲ್ಲಿ ಬಳಕೆಯಾಗಿರುವ ಕೆಲವು ಶಬ್ದಗಳ ಮಹಿಮಾತಿಶಯದ ಅರ್ಥವನ್ನು ಶಿವಶರಣರು ನೀಡಿ ಅವುಗಳಿಗೆ ಹೊಸ ಅರ್ಥಶಕ್ತಿಯನ್ನು ತುಂಬಿರುವುದು ನಿಃಸಂದೇಹವಾಗಿದೆ.

ಶರಣ ಎಂಬ ಸಂಸ್ಕೃತ ಶಬ್ದವು ತನ್ನನ್ನು ಸಮರ್ಪಿಸಿಕೊಂಡವನು ಎಂಬ ಅರ್ಥದಲ್ಲಿದೆ. ಶಿವಶರಣ ಎಂಬ ರೀತಿಯಲ್ಲಿ ವೀರಶೈವ ಭಕ್ತರಿಗೆ ಸಲ್ಲುವ ಈ ಶಬ್ದವು ವಚನಸಾಹಿತ್ಯದ ಕೊಡುಗೆಯಾದರೂ ಸಹ ಹರಿಶರಣ ಎಂದು ಹರಿಭಕ್ತರನ್ನುದ್ದೇಶಿಸಿ ಬಳಸಿದ್ದರು. ಅದರೆ ಶರಣ ಎಂಬ ಶಬ್ದವು ವೀರಶೈವ ಭಕ್ತರನ್ನೇ ಸೂಚಿಸುತ್ತದೆ. ಜಂಗಮ, ದಾಸೋಹ, ಅನುಭಾವ ಮೊದಲಾದ ಶಬ್ಧಗಳ ವಿಶಿಷ್ಟ ಅರ್ಥಗಳನ್ನು ಬೇರೆ ಲೇಖಕರು ತಿಳಿಸಿರುತ್ತಾರೆ.

ನಿಜ ವೆಂಬ ಕನ್ನಡ ಶಬ್ದವನ್ನು ನಿತ್ಯಸತ್ಯ ಎಂಬ ಶಬ್ದಕ್ಕೆ ಪ್ರತಿಯಾಗಿ ಬಳಸಿದ್ದಾರೆ.

ಮಹಾಮನೆ ಎಂಬ ಶಬ್ದವು ಶರಣರ ಮಾತಿನಲ್ಲಿ ಮಹಮನೆ ಎಂದಾಗಿ ಹೆಚ್ಚು ಮೆಚ್ಚುಗೆ ಗಳಿಸುತ್ತದೆ. ಇದು ಕೈಲಾಸವನ್ನು ಸೂಚಿಸಬಹುದು, ಶರಣರು ಅನುಭಾವ ಗೋಷ್ಠಿಯನ್ನು ನಡೆಸುವ ಅನುಭವ ಮಂಟಪವನ್ನು ಸೂಚಿಸಬಹುದು. "ಕರ್ತನಡಿದರೆ ಮರ್ತ್ಯದಲ್ಲಿ ಮಹಾಮನೆಯು ಕಟ್ಟಿದೆ" ಎಂಬ ಬಸವಣ್ಣನವರ ವಚನದಲ್ಲಿ ಮಹಾಮನೆ ಎಂಬ ರೂಪವೂ ದೊರೆಯುತ್ತದೆ.

ನಿತ್ಯಸನಾತನ ತತ್ತ್ವಗಳನ್ನು ಶರಣರು ನಿರೂಪಿಸಿದರೂ ಅವರ ಅಭಿವ್ಯಕ್ತಿ ರೂಪದಿಂದಾಗಿ ಶೈಲಿಯ ಬಳಕೆಯಿಂದಾಗಿ ಆ ತತ್ತ್ವಗಳು ನೂತನ ಸತ್ತ್ವದಿಂದ ಕಂಗೊಳಿಸುತ್ತವೆ.

ಅಲ್ಲಮಪ್ರಭು ತಿಳಿಸುವ "ಅಂತರಂಗದ ಅರುಹಿಗೆ ಆಚಾರವೇ ಕಾಯ", ಎಂಬ ಕಿರಿಯ ನುಡಿಯು ತಿಳಿಸುವ ಅರ್ಥವು ಕಾಯ, ಎಂಬ ಬಾಹ್ಯಸ್ವರೂಪದ ರೂಪಕ ದಿಂದಾಗಿ ಜ್ಞಾನಿಯಾದವನು ಉತ್ತಮ ನಡತೆಯುಳ್ಳವನಾಗಿರಬೇಕು; ಉತ್ತಮ ವಿಚಾರವು, ಉತ್ತಮವಾದ ಆಚಾರವಿರುವುದರಿಂದಲೇ ಸಾರ್ಥಕತೆಯನ್ನು ಪಡೆಯುತ್ತದೆ ಎಂಬುದನ್ನು ಸೂಚಿಸುತ್ತದೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಎಂಬ ಕಮ್ಮಟ (ನಾಣ್ಯ ಶಾಲೆಯ) ರೂಪಕದ ನವೀನ ಉಪಯೋಗವು ಬೆರಗುಗೊಳಿಸುವಂತೆಯೇ ಇಹಲೋಕದ, ದೈನಂದಿನ ಜೀವನದ, ಮಹತ್ವವನ್ನು ಸಾರುತ್ತಲೇ ಇದು ಲಿಂಗಮೆಚ್ಚಿ ಅಹುದಹುದು ಎನ್ನುವಂತೆ ದೇವರು ಮೆಚ್ಚುವ ಉದಾತ್ತಜೀವನವನ್ನು ಅನುಸರಿಸಬೇಕು ಎಂಬುದನ್ನು ಸೂಚಿಸುತ್ತದೆ.

ಉದಯಾಸ್ತಮಾನವೆಂಬ ಕೊಳಗದಿಂದ ಆಯುಷ್ಯವನ್ನು ಅಳೆವ ಅದ್ಭುತವಾದ ಪ್ರತಿಮೆಯಂಥ ನೂತನಾಲಂಕಾರಗಳು ವಚನ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುತ್ತವೆ.

ಶಿವಶರಣರ ಬೆಡಗಿನ ವಚನಗಳು ಸಾಮಾನ್ಯರಿಗೆ ತಿಳಿಯಲು ಕಷ್ಟವಾಗಿವೆ. ವೀರಶೈವಸಾಹಿತ್ಯ-ದರ್ಶನ ಪರಂಪರೆಗಳನ್ನು ಚೆನ್ನಾಗಿ ಅರಿತವರೇ ಇವುಗಳ ಅರ್ಥ ವನ್ನು ಸರಿಯಾಗಿ ಮಾಡಬಲ್ಲವರು.

ಫೆಬ್ರವರಿ - 1992

ಅಲ್ಲಮಪ್ರಭು ಮಾತ್ರವಲ್ಲ, ಚನ್ನಬಸವಣ್ಣ, ಉರಿಲಿಂಗದೇವ, ಮೋಳಿಗೆ ಮಾರಯ್ಯ, ಸಿದ್ಧಲಿಂಗ ಶಿವಯೋಗಿ, ಮುಂತಾದ ವಚನಕಾರರಲ್ಲಿ ಸಹ ಬೆಡಗಿನ ವಚನಗಳು ದೊರೆಯುತ್ತವೆ. ತಮ್ಮ ಭಾಷೆಯ ಸರಳತೆಗೆ ಹೆಸರಾದ ಬಸವಣ್ಣನವರ ವಚನಗಳಲ್ಲಿಯೂ ವಿರಳವಾಗಿ ಇವು ದೊರೆಯುತ್ತವೆ.

ಒಂದೆತ್ತಿಂಗೈವರು ಗೊಲ್ಲರು ಅವರೈವರಿಗೆ ಐದೈದಾಳಯ್ಯ ಇಲ್ಲಿ ಎತ್ತು ಶರೀರವಾದರೆ ಪಂಚಭೂತಗಳು ಗೊಲ್ಲರು ಎಂದು ಅರ್ಥಮಾಡಿದರೆ ಅವರೈವರಿಗೆ ಐದೈದಾಳಯ್ಯ! ಎಂಬ ಮುಂದಿನಮಾತು ಸುಲಭವಾಗಿ ಅರ್ಥವಾಗುವುದಿಲ್ಲ, ಪಂಚ-ವಿಂಶತಿತತ್ತ್ವಗಳೇ ಎಂಬ ಸಂದೇಹ ಮೂಡುತ್ತದೆ. ಇದರಂತೆ ಅಲ್ಲಮನ "ತುಂಬಿ ಬಂದಡೆ ಪರಿಮಳ ಓಡಿತ್ತಕಂಡೆ" ಎಂಬ ವಚನವನ್ನು ತುಂಬಿ ಎಂದರೆ ಅನುಭಾವ ಎಂದು ಅರ್ಥಮಾಡಿ, ಪರಿಮಳ ಎಂದರೆ ವಿಷಯವಾಸನೆ ಎಂದು ಅರ್ಥಮಾಡುವ ಮನಸ್ಸಾಗುತ್ತದೆ. ಆದರೆ ಈ ಬೆಡಗುಗಳ ಹೆಚ್ಚಿನ ಅಭ್ಯಾಸಮಾಡಿದವರೇ ಸರಿಯಾದ ಅರ್ಥ ಹೀಗೆಯೇ ಎಂದು ಹೇಳಬಲ್ಲರು.

ಇಂಥ ವಚನಗಳಿಗೆ ಟೀಕುಗಳನ್ನು ಬರೆದ ಹಿಂದಣ ವಿದ್ವಾಂಸರು ಸರಿಯಾದ ಅರ್ಥವಿವರಣೆಯ ದಾರಿ ತೋರಬಲ್ಲರು

ಮುದ್ದಾದ ಅಚ್ಚಗನ್ನಡದ ಶಬ್ದಗಳನ್ನು ಬಹಳವಾಗಿ ಉಪಯೋಗಿಸಿ ವಚನ ಬರೆದ ವಚನಕಾರರ ಶೈಲಿಯಲ್ಲಿ ಹಲವೆಡೆ ಶಬ್ದಾಲಂಕಾರಗಳು ಅಪ್ರಯತ್ನವಾಗಿ ಬಂದು ನಾದಲೋಲತೆಯು ಹೆಚ್ಚಾಗಲು ಸಹಾಯಕವಾಗಿವೆ. ಖಂಡಪ್ರಾಸ (ದ್ವಿತೀಯಾಕ್ಷರಪ್ರಾಸ)ದ ಉಪಯೋಗವು ಹೇರಳವಾಗಿದೆ. "ಕುರುಹಿಗೆ ಪೂಜೆಯಲ್ಲದೆ ಅಱುಹಿಗೆ ಪೂಜೆಯುಂಟೇ" (ಮಣಿಗಳ.........ತ್ರಿಣಯನ) ಹರಿವ ಹಾವಿಗಂಜೆ, ಉರಿಯನಾಲಿಗೆ ಗಂಜೆ, ಸುರಿಗೆಯ ಮೊನೆಗಂಜೆ ಒಂದಕ್ಕಂಜುವೆ, ಒಂದಕ್ಕಳುವೆ. ಎಂಬಲ್ಲಿ ಬಂದಂಥ-ವಾಗ್ಮಿತೆಯ ವಿಲಾಸವು ಬಹಳೆಡೆ ಶೋಭಿಸುತ್ತದೆ. ಅಂತ್ಯ ಪ್ರಾಸವು ಸಹಜವಾಗಿಬರುತ್ತದೆ. ಅಂಗದಿಂದೆ ಲಿಂಗಸುಖ ಲಿಂಗದಿಂದೆ ಅಂಗಸುಖ ಆ ಅಂಗಲಿಂಗ ಸಂಗ ಸುಖದಿಂದೆ ಪರಮಸುಖ ದೊರಕುವುದು ನೋಡಾ. ಜಗದಗಲವ ಮಾಯಾಜಾಲವ ಹಿಡಿದು ಕಾಲನೆಂಬ ಜಾಲಗಾರ ಮಾಯಾಜಾಲವ ಬೀಸಿದ ನೋಡಯ್ಯಾ.......ಇಲ್ಲಿ ಶಬ್ದ ಅರ್ಥಗಳೆರಡು ಮೋಡಿ ಮಾಡುತ್ತಿವೆ.

 

## ಶಿವಶರಣೆಯರು ಮತ್ತು ಆಂದಿನ ಸಮಾಜ.

ಎ. ಪಂಕಜ, ನಂ. 316, ಸಂಪಿಗೆರಸ್ತೆ, ಮಲ್ಲೇಶ್ವರಂ, ಬೆಂಗಳೂರು 590 003.

(ಮುಂದುವರಿದಿದೆ.)

12) **ಶಿವಪ್ರಿಯನಾಚಿ:—** ಚಂದಪೂರಿನ ವರ್ತಕ ಮಲ್ಲಯ್ಯನಿಗೆ ನಾಚಯ್ಯ, ಅರುಣಾದ್ರಿ, ಎಂಬ ಎರಡು ಗಂಡುಮಕ್ಕಳು ಮತ್ತು ಶಿವಪ್ರಿಯನಾಚಿ ಎಂಬಹೆಸರಿನ ಮಗಳೊಬ್ಬಳೂ ಇದ್ದರು. ಬಹುಶ್ರೀಮಂತನಾಗಿದ್ದ ಈ ಮಲ್ಲಯ್ಯ ಮೃತನಾದ ಮೇಲೆ ಆವನ ಮಕ್ಕಳು ತಂದೆಯ ಆಸ್ತಿಯನ್ನು ಸಮವಾಗಿ ಹಂಚಿಕೊಂಡರು. ಶಿವಭಕ್ತಳಾದ ಶಿವಪ್ರಿಯನಾಚಿಯು ತನ್ನ ಪಾಲಿಗೆ ಬಂದ ಆಸ್ತಿಯನ್ನು ಶಿವನ ಪೂಜಾಕೆಲಸಗಳಿಗೆ ದಾಸೋಹಕಾರ್ಯಗಳಿಗೆ ಎಂದು ಸತ್ಕಾರ್ಯಕ್ಕೆ ಬಳಸಿಕೊಳ್ಳುತ್ತಿದ್ದಳು. ಹೀಗಿರುವಲ್ಲಿ ಒಮ್ಮೆ ಹಿರಿಯ ಅಣ್ಣನಾದ ನಾಚಯ್ಯನ ಹಡಗು ಸಮುದ್ರದಲ್ಲಿ ಮುಳುಗಿ ಹೋದುದರಿಂದ ದು:ಖತಪ್ತನಾದ ಅವನು ಪರಲೋಕವಾಸಿಯಾದನು. ಅಣ್ಣ ಸತ್ತ ಮೇಲೆ ಅರುಣಾದ್ರಿಯು ಅವನ ಆಸ್ತಿಯನ್ನು ತಾನೇ ಲಪಟಾಯಿಸಿದ. ಅಲ್ಲದೆ ಹೆಂಗಸರಿಗೆ ಆಸ್ತಿಯಲ್ಲಿ ಪಾಲುಕೊಡುವುದು ಎಲ್ಲಾದರೂ ಉಂಟೆ ? ಹಿಂದೆ ನಿನಗೆಂದು ಅಣ್ಣ ಕೊಟ್ಟಿದ್ದನ್ನು ಹಿಂದಕ್ಕೆಕೊಟ್ಟುಬಿಡು ಎಂದು ತಂಗಿಯನ್ನು ಹಿಂಸಿಸಿ ತೆಗೆದು ಕೊಂಡು ಬಿಟ್ಟನು.

ಶಿವಭಕ್ತಳಾದ ಶಿವಪ್ರಿಯನಾಚಿಗೆ ಯಾವ ಆಸ್ತಿಯ ಆಸೆಯೂ ಇರಲಿಲ್ಲ ಆದರೆ ತನ್ನ ದಾಸೋಹದ ಕೆಲಸ ನಿಂತುಹೋಯಿತಲ್ಲ ಎನ್ನುವ ಕೊರಗು. ಅದನ್ನೇ ಅವಳು ಭಗವಂತನಲ್ಲಿ ಅರಿಕೆ ಮಾಡಿಕೊಂಡಳು. ಆವಳ ಪ್ರಾರ್ಥನೆಯನ್ನು ಕೇಳಿಸಿಕೊಂಡ ಶಿವನು ಆವಳ ಸತ್ತ ಅಣ್ಣ ನಾಚಯ್ಯನ ರೂಪದಲ್ಲಿ ಬಂದಿಳಿದ. ನಂತರ ಅರುಣಾದ್ರಿಗೆ ತಂಗಿಗೆಂದು ನಾವು ಕೊಟ್ಟ ಆಸ್ತಿಯ ಪಾಲನ್ನು ಅವಳಿಗೆ ಕೊಟ್ಟುಬಿಡು ಎಂದುಹೇಳಿ ಕೊಡಿಸಿದನು. ತಾನುಬಂದ ಕೆಲಸ ಮುಗಿದ ಮೇಲೆ ಮತ್ತೆ ನಾಚಯ್ಯನ ವೇಷದಲ್ಲಿ ಬಂದಿದ್ದ ಭಗವಂತನು ಕಾಣದಾದನು.

ಕಡೆಗೆ ಭಗವಂತನೇ ಅನ್ಯಾಯವನ್ನು ಹೋಗಲಾಡಿಸಲು ಶಿವಪ್ರಿಯೆಗೆ ಸಹಾಯ ಮಾಡಲು ಈ ರೀತಿ ಬಂದಿದ್ದ ಎಂದು ತಿಳಿದಮೇಲೆ ಶಿವಭಕ್ತೆ ಶಿವಪ್ರಿಯಳನ್ನು ಎಲ್ಲರೂ ಭಕ್ತಿ, ಗೌರವಾದರಗಳಿಂದ ನೋಡಿಕೊಂಡರು. ತಮ್ಮನಾದ ಅರುಣಾದ್ರಿಯೂ ತನ್ನ ತಪ್ಪನ್ನು ತಿದ್ದಿಕೊಂಡನು.

ಗಂಡುಮಕ್ಕಳಷ್ಟು ಹಕ್ಕು ಹೆಣ್ಣಿಗೂ ಇದೆ ಎಂಬುದು ಈ ಕಥೆಯಿಂದ ನಮಗೆ ತಿಳಿದು ಬರುತ್ತದೆ. ಮುಂದೆ ಶಿವಪ್ರಿಯಳು ಲಿಂಗದಲ್ಲಿ ಐಕ್ಯಳಾದಳು

13) **ಕೋಲಂಬೆ**—ಜಾಕಿನೊಳಪುರದಲ್ಲಿ ಶಿವಭಕ್ತ ದಂಪತಿಗಳಿಗೆ ಕೋಲಂಬೆ ಎಂಬ ಮಗಳಿದ್ದಳು. ಅವಳ ತಂದೆ ತಾಯಿಗಳು ಪ್ರತಿದಿನವೂ ಶಿವಾಲಯಕ್ಕೆ ಹೋಗಿಬರುತ್ತಿದ್ದರು. ಇದರಿಂದ ಈ ಕೋಲಂಬೆಗೆ ಶಿವನಲ್ಲಿಭಕ್ತಿ. ಅವಳಿನ್ನು ಚಿಕ್ಕಹುಡುಗಿ ಆದರೂ ತಾನೇ ಸ್ವತಃ ಶಿವಾಲಯ ಕಟ್ಟುವ ಆಸೆ ಅದಕ್ಕಾಗಿ ಹುಲ್ಲು ಗುಡಿಸಲನ್ನು ಕಟ್ಟಿ ಅಲ್ಲಿ ಕಲ್ಲೊಂದನ್ನು ಇಟ್ಟು ಅದನ್ನೇ ಶಿವನೆಂದು ಭಾವಿಸಿ ಪ್ರತಿನಿತ್ಯ ಪೂಜೆಮಾಡಿ ಅದಕ್ಕೆ ಮನೆಯಿಂದ ನೈವೇದ್ಯಕ್ಕೆಂದು ತೈಲ, ತುಪ್ಪ ತೆಗೆದು ಕೊಂಡು ಹೋಗುತ್ತಿದ್ದಳು. ಅದನ್ನು ಕಂಡುಅವಳ ಗೆಳತಿಯರೂ ಅವಳಂತೆ ಮನೆಯಿಂದ ತೈಲ ತುಪ್ಪ ತಂದು ದೀಪ ಹಚ್ಚಿ ಅಡಿಗೆಮಾಡಿ ದೇವರಿಗೆ ನೈವೇದ್ಯ ಮಾಡಿ ದೀಪಹಚ್ಚಿ ಬರುತ್ತಿದ್ದರು. ಮಕ್ಕಳಿಗೆಲ್ಲಾ ಇದುಆಟವಾಗಿತ್ತು. ಆದರೆ ಆಮಕ್ಕಳ ಮನೆಯ ಹಿರಿಯರು ಮನೆಯ ಸಾಮಾನುಗಳನ್ನೆಲ್ಲಾ ಹಾಳು ಮಾಡುವಿರಿ. ಅಕ್ಕಿ, ಬೇಳೆ ಎಣ್ಣೆ ಎಲ್ಲಾ ವ್ಯರ್ಥವಾಗುತ್ತದೆ. ಇನ್ನುಮೇಲೆ ನೀವು ಕೋಲಂಬೆ ಜೊತೆಯಲ್ಲಿ ಆಡಲು ಹೋಗಕೂಡದು. ಎಂದುಗದರಿ ಆ ಮಕ್ಕಳ್ಯಾರೂ ಕೋಲಂಬೆ ಕಟ್ಟಿದಗುಡಿಸಿಲಿಗೆ ಹೋಗದಂತೆ ತಡೆದರು. ತತ್ಫಲವಾಗಿ ಆದಿನ ಯಾರ ಮನೆಯ ಹಸುವೂ ಹಾಲನ್ನು ಕೊಡಲಿಲ್ಲ. ಎಷ್ಟೋ ಪ್ರಯತ್ನ ಮಾಡಿ ನಿರಾಸೆಹೊಂದಿ ಕಡೆಗೆ ಪ್ರಶ್ನೆಕೇಳಿ ಕಾರಣವನ್ನು ತಿಳಿದರು. ತಾವು ತಮ್ಮ ಮಕ್ಕಳಿಗೆ ಕೋಲಂಬೆ ಜೊತೆಯಲ್ಲಿ ಆಡಲು ಕಳುಹಿಸಲಿಲ್ಲ ಮತ್ತು ಅವರ ಆಟಕ್ಕೆಂದು ಅಕ್ಕಿ ಬೇಳೆಗಳನ್ನು ಕೊಡಲಿಲ್ಲ ಎಂಬುದನ್ನು ತಿಳಿದ ಎಲ್ಲಾ ಮನೆಯವರು ಪುನಃ ಮಕ್ಕಳನ್ನು ಮಾಮೂಲಿನಂತೆ ಕಳುಹಿಸಿದಾಗ ಹಸುಗಳು ಹಾಲು ಕರೆದವು.

ಕೋಲಂಬೆಗೆ ಆದೇ ಪೂಜೆನಿಜ ಭಕ್ತಿಯದಾಗಿತ್ತು ಒಮ್ಮೆ ವೈಷ್ಣವನೋರ್ವ ಆ ಗುಡಿಸಿಲಿಗೆ ಬೆಂಕಿ ಹಚ್ಚಿದಾಗ ಅದು ಅವನ ಮನೆಯನ್ನೇ ಸುಟ್ಟು ಹಾಕಿತು. ಕೋಲಂಬೆಯನ್ನು ದಹಿಸದೆ, ಶಿವನು ಒಲಿದು ಅವಳಿಗೆ ವರವನ್ನುಇತ್ತನು. ಇಂದಿಗೂ ಕೋಲಂಬೆಯ ಹಬ್ಬವೆಂದು ಅವಳ ಹೆಸರಿನಲ್ಲಿ ವರ್ಷಕ್ಕೊಂದು ಬಾರಿ ನಡೆಯುತ್ತಿದೆ.

14 **ಕೋಳೂರು ಕೊಡಗೂಸು**:– ಸುರಪುರಕ್ಕೆ ಸಮೀಪದ ಕೋಳೂರು ಗ್ರಾಮದಲ್ಲಿ ಶಿವದೇವನೆಂಬ ಶಿವಭಕ್ತ ದಂಪತಿಗಳಿದ್ದರು. ಅವರು ದಿನವೂ ತಪ್ಪದೆ ತಮ್ಮ ಗ್ರಾಮದ ಕಲ್ಲೇಶ್ವರ ಲಿಂಗಕ್ಕೆ ಪಾತ್ರೆ ತುಂಬ ಕೆನೆಯ ಹಾಲನ್ನೂ ನೈವೇದ್ಯ ಇಟ್ಟು ನಂತರ ಉಳಿದಕೆಲಸಗಳಿಗೆ ಗಮನ ಕೊಡುತ್ತಿದ್ದರು. ಅವರ ಭಕ್ತಿಗೆ ಮೆಚ್ಚಿದನಂತೆ ಪರಮಾತ್ಮನು ಅವರಿಗೆ ಕನ್ಯಾರತ್ನವನ್ನು ಮಗಳನ್ನಾಗಿ ಕರುಣಿಸಿದ್ದನು ಒಮ್ಮೆ ಈ ತಂದೆ ತಾಯಿಗಳು ಕೆಲಸದ ನಿಮಿತ್ತ ಪರಊರಿಗೆ ಹೋಗಬೇಕಾಗಿಬಂತು. ಆಗ ತಾವು ಹಿಂತಿರುಗಿ ಬರುವವರೆಗೆ ಈ ಹಾಲಿನ ನೈವೇದ್ಯ ಕೆಲಸವನ್ನು ಹುಡುಗಿ ಚೆನ್ನಕ್ಕನಿಗೆ ವಹಿಸಿದರು.

ಚೆನ್ನಕ್ಕನಿಗೆ ಎಲ್ಲಿಲ್ಲದ ಸಂತೋಷ. ತನ್ನ ತಂದೆ ತಾಯಿಗಳಂತೆ, ದೊಡ್ಡವರಂತೆ ತಾನು ಇಂದು ದೇವರಿಗೆ ಹಾಲನ್ನು ನೈವೇದ್ಯಕ್ಕೆ ಇಡುತ್ತೇನೆ ಎಂದು ಆದೆಷ್ಟೋಸಲ ತನ್ನಲ್ಲಿ ತಾನೇ ಮನದಲ್ಲಿ ಹೇಳಿಕೊಂಡಳು. ಪ್ರತಿದಿನವೂ ತಂದೆ ತಾಯಿಗಳು ಏನು ಮಾಡುತ್ತಿದ್ದರು ಎಂಬುದನ್ನು ತಿಳಿದವಳಾಗಿದ್ದ ಅವಳು ಅಂದು ಮಡಿಉಟ್ಟಳು, ಭಸ್ಮವನ್ನು ಹಣೆಯಲ್ಲಿ ಧರಿಸಿದಳು. ಕೊರಳಲ್ಲಿ ರುದ್ರಾಕ್ಷಿಸರ ಧರಿಸಿದಳು. ಕಾಯಿಸಿದ ಹಾಲನ್ನು ಪಾತ್ರೆ ತುಂಬ ಕೆನೆ ಕಟ್ಟುವಂತೆ ಆರಲಿಟ್ಟಳು. ತಾವು, ಮಕ್ಕಳು ಬಿಸಿ ಕುಡಿಯಲು ಆಗದು ಎಂದು ಅಮ್ಮ ತಮಗೆ ಆರಿಸಿ ತಾನೆ ಕೊಡುತ್ತಾರೆ. ಹಾಗೆಯೇ ದೇವರಿಗೆ ಬಿಸಿ ಆಗದು ಪಾಪ. ನಂತರ ಆವನ ನಾಲಿಗೆ ಸುಟ್ಟುಹೋದರೆ ಎಂಬ ಮಾತು ಶ್ರದ್ಧಾಭಕ್ತಿಗಳಿಂದ ದೇವಾಲಯಕ್ಕೆ ಹಾಲಿನ ಪಾತ್ರೆಯೊಂದಿಗೆ ಹೋದಳು. ಅವಳು ತನ್ನ ಪೂಜೆಯನ್ನು ಮುಗಿಸಿ ಕಲ್ಲಿನಾಥನನ್ನು ಹಾಲು ಕುಡಿಯುವಂತೆ ಕೇಳಿಕೊಂಡಳು. ಎಷ್ಟುಹೊತ್ತಾದರೂ ಹಾಲಿನ ಪಾತ್ರೆಯು ಬರಿದಾಗಲೇ ಇಲ್ಲ. ಪರಿಪರಿ ವಿಧದಲ್ಲಿ ದೇವರನ್ನು ಬೇಡಿಕೊಂಡಳು. ತಾನು ಕಂಬದ ಮರೆಯಲ್ಲಿ ನಿಂತಿರುವುದಾಗಿಯೂ, ಸದ್ದಿಲ್ಲದೆ ದೇವರು ಬಂದು ಕುಡಿದು ಹೋಗಬೇಕೆಂದೂ ಪ್ರಾರ್ಥಿಸಿದಳು. ಕುಡಿಯದಿದ್ದರೆ ಗುಮ್ಮ ಬರುತ್ತೆ ನೋಡಿಕೋ ಎಂದು ಹೆದರಿಸಿದಳು. ನೀನೇಕೆ ಹಾಲು ಕುಡಿಯುತ್ತಿಲ್ಲ ನಾನು ಚಿಕ್ಕವಳೆಂದೇ ಎಂದು ಕಲ್ಲಿನಾಥನನ್ನು ಕೇಳಿದಳು. ಯಾವುದಕ್ಕೂ ಉತ್ತರವಿಲ್ಲದಿದ್ದಾಗ, ದುಃಖದಿಂದ ಆ ಕಲ್ಲಿನಾಥನನ್ನು ತಬ್ಬಿಕೊಂಡು ನೀನು ಆ ಹಾಲನ್ನು ಕುಡಿಯದಿದ್ದರೆ ನಾನು ಇಲ್ಲೇ ಪ್ರಾಣ ಕಳೆದುಕೊಳ್ಳುತ್ತೇನೆ, ಮನೆಗೇ ಹೋಗುವುದಿಲ್ಲ ನೋಡು ಎಂದುಕೊಂಡಳು.

ಅವಳ ನಿಜಭಕ್ತಿಗೆ ಮೆಚ್ಚಿದ ಭಗವಂತ ಪ್ರತ್ಯಕ್ಷ ಬಂದು ಅವಳ ಕೈಹಿಡಿದು, ಆ ಹಾಲನ್ನು ಕುಡಿದು ಹರ್ಷಿಸಿದ. ಅಂದಿನಿಂದ ಚೆನ್ನಕ್ಕ ತಂದೆ ತಾಯಿ ಬರುವವರೆಗೆ ಹೀಗೆ ದೇವರಿಗೆ ತನ್ನ ಕೈಯ್ಯಾರ ಹಾಲು ಕುಡಿಸುವ ಪುಣ್ಯವಂತಳಾಗಿದ್ದಳು.

ಪರ ಊರಿಗೆ ಹೋಗಿದ್ದ ತಂದೆ ತಾಯಿಗಳು ಹಿಂತಿರುಗಿ ಬರುತ್ತಿದ್ದಾಗ ಚೆನ್ನಕ್ಕ ಶಿವಾಲಯದಿಂದ ಖಾಲಿಪಾತ್ರೆ ಹಿಡಿದು ಖುಷಿಯಿಂದ ಹಿಂತಿರುಗುತ್ತಿದ್ದಳು. ಶಿವದೇವನು ಹಾಲುಏನು ಮಾಡಿದೆ? ಎಂದು ಕೇಳಿದನು ಅವಳು ಲಿಂಗ ಕುಡಿಯಿತೆಂದರೆ ನಂಬಲು ಆಗದೆ ಅವಳನ್ನು ಪರೀಕ್ಷಿಸಲು ಮರುದಿನ ಶಿವಾಲಯದಲ್ಲಿ ಬಂದು ಮರೆಯಲ್ಲಿ ನಿಂತು ನೋಡುತ್ತಿದ್ದನು. ಪ್ರತಿದಿನದಂತೆ ಎಷ್ಟೇಕರೆದರೂ ಅಂದು ಶಿವನು ಬರಲಿಲ್ಲವಾಗಿ ಚೆನ್ನಕ್ಕ ಅಳಲಾರಂಭಿಸಿದಳು. ನೀನು ಹೇಳಿದ ಕಥೆಯೆಲ್ಲಾ ಸುಳ್ಳು ಎಂದು ತಂದೆಯು ಮಗಳನ್ನು ಹೊಡೆಯಲಾರಂಭಿಸಿದನು. ಆಗ ಶಿವನು ಅವಳನ್ನು ತನ್ನಲ್ಲಿ ಸೇರಿಸಿಕೊಳ್ಳಲು ಮುಂದಾದನು. ಅವಳ ಭಕ್ತಿಯನ್ನು ಗುರುತಿಸಿದ್ದ ಶಿವದೇವ ಮಗಳನ್ನು ಕಳೆದುಕೊಳ್ಳುವ ಇಷ್ಟ ಇಲ್ಲದೆ ಕೂದಲು ಹಿಡಿದು ಎಳೆದುದರ ಫಲವಾಗಿ ಆ ಕೂದಲು ಕಲ್ಲಿನಾಥನ ಲಿಂಗದ ಮೇಲೆ ಕಾಣುತ್ತಿವೆಯಂತೆ.

ಈ ರೀತಿ ಚಿಕ್ಕವಯಸ್ಸಿನಲ್ಲೇ ತನ್ನ ಅಪರಿಮಿತವಾದ ಭಕ್ತಿಭಾವನೆಯಿಂದ ಭಗವಂತನೊಂದಿಗೇ ಆಡಿದ ಕೋಳೂರ ಕೊಡಗೂಸು ಚೆನ್ನಕ್ಕ ಶ್ರೇಷ್ಠ ಶಿವಶರಣೆ ಆದಳು. ಭಗವಂತನು ಭಕ್ತರ ಪರಾಧೀನ ಎಂಬುದನ್ನು ತೋರಿಸಿಕೊಟ್ಟಳು.

15. **ಗಂಗಾಂಬಿಕೆ:–** ಬಿಜ್ಜಳನ ಮಂತ್ರಿ ಬಲದೇವನ ಮಗಳಾದ ಈಕೆ ಭಕ್ತಿ, ಜ್ಞಾನ, ವೈರಾಗ್ಯಗಳೆಲ್ಲವನ್ನು ಪಡೆದವಳು. ಕುದುರೆಸವಾರಿ, ಕತ್ತಿವರಸೆ ಎಲ್ಲವನ್ನು ಬಲ್ಲವಳು. ಈಕೆಯನ್ನು ತಂಗಿಯ ಮಗ ಬಸವೇಶ್ವರನಿಗೆ ಕೊಟ್ಟು ವಿವಾಹ ಮಾಡಿದರು. ಮಂತ್ರಿ ಕುವರಿ ಈ ಜೀವನಕ್ಕೆ ಹೊಂದಿಕೊಂಡಳು. ದೇವರಪೂಜೆಗೆ ಅಣಿಮಾಡುವುದು, ಪತಿಯೊಂದಿಗೆ ಪೂಜೆ, ಅಡಿಗೆಮನೆಯಕೆಲಸ ಅತಿಥಿಸತ್ಕಾರ, ಸಂಗೀತ ಸಾಧನೆ, ಪ್ರೇಮದಿಂದ ಪತಿಸೇವೆ, ನಿಷ್ಠೆಯಿಂದ ಲಿಂಗಪೂಜೆ, ಮಮತೆಯಿಂದ ಅಕ್ಕ ನಾಗಲಾಂಬಿಕೆಯ ಸೇವೆ, ಶ್ರದ್ಧೆಯಿಂದ ಮನೆಕೆಲಸ. ತಂದೆಯಿಂದ ಬಂದ ಹಣ ಮಹಾಮನೆಯಲ್ಲಿ ಶರಣರ ಸೇವೆಗೆ ಮೀಸಲಾಗಿಟ್ಟಳು. ಅನುಭವ ಮಂಟಪದ ಜ್ಞಾನಜ್ಞಾನ ನಿಧಿ, ವಚನಕಾರ್ತಿ, ಸ್ಫೂರ್ತಿಸೆಲೆ, ಧರ್ಮಾಚರಣೆಗಾಗಿ ಖಡ್ಗಧಾರಿ ಆದಳು. ಯುದ್ಧಮಾಡಿ ವೀರ ಮರಣಹೊಂದಿದಳು.

---

## ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾ
ಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು
ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು
ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ
ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರಮುಖೇನ
"ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು
ಸಹಕರಿಸಬೇಕಾಗಿ ಪ್ರಾರ್ಥನೆ. ತಮ್ಮ
ಸದಸ್ಯತ್ವದ ನಂಬರನ್ನು
ತಪ್ಪದೇ ಬರೆಯಿರಿ

# ವಿಜ್ಞಾನ ಮತ್ತು ಆಧ್ಯಾತ್ಮ

ಎಚ್.ಎಸ್. ನರಸಿಂಹ ಜೀಯರ್, ಶ್ರೀ ಬಸವೇಶ್ವರ ಇಂಗ್ಲಿಷ್ ಶಾಲೆ, ತುಮಕೂರು - 2.

ಯೋಗದರ್ಶನವು ಅತ್ಯಂತ ಪ್ರಾಚೀನವಾದುದು. ಪತಂಜಲಿಯ ಯೋಗ ಸೂತ್ರಗಳು ಮೈತ್ರೀ ಉಪನಿಷತ್ತಿನಲ್ಲಿವೆ ಇದರ ಮೂಲ ಪ್ರವರ್ತಕ ಹಿರಣ್ಯಗರ್ಭ. ಇವನ ಸಂಪ್ರದಾಯವನ್ನು ಅನುಸರಿಸಿ ಪತಂಜಲಿಯು ಯೋಗದರ್ಶನ ಪ್ರಸಾರ ಮಾಡಿದ್ದಾನೆ. "ಯೋಗಶ್ಚಿತ್ತವೃತ್ತಿ ನಿರೋಧಃ" ಎಂದರೆ ಚಿತ್ತವೃತ್ತಿಗಳ ನಿಯೋಗವೇ ಯೋಗ. ಅಷ್ಟಾಂಗಯೋಗವು ಆಧ್ಯಾತ್ಮ ಸಾಧನೆಗೆ ಅತ್ಯಾವಶ್ಯಕ. ಭೌತಿಕದೇಹದ ಆರೋಗ್ಯವನ್ನು ಕಾಪಾಡುವುದರ ಜೊತೆಗೆ ಮಾನಸಿಕ ಆರೋಗ್ಯವನ್ನೂ ಹತೋಟಿಯಲ್ಲಿಟ್ಟುಕೊಳ್ಳಲು ಯೋಗವು ಸಹಕಾರಿ. ಸ್ಥೂಲದೇಹ ಹಾಗೂ ಆಂತರಿಕ ಮನಸ್ಸು ಇವೆರಡರ ಸ್ವಚ್ಛತೆಗೆ ಪತಂಜಲಿ ಋಷಿಯು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಧಾರಣ, ಧ್ಯಾನ ಮತ್ತು ಸಮಾಧಿ ಎಂಬ ಎಂಟು ಮೆಟ್ಟಲುಗಳನ್ನು ನಿಯಮಿಸಿದ್ದಾರೆ. ಯಮ ಮತ್ತು ನಿಯಮಗಳು ಧರ್ಮ ಶಾಸ್ತ್ರರೀತಿ ನೀತಿ ನಿಯಮಗಳಿಂದ ಜೀವನ ನಡೆಸಲು ತಿಳಿಸುತ್ತವೆ ಆಸನ, ಪ್ರಾಣಾಯಾಮ ಮತ್ತು ಪ್ರತ್ಯಾಹಾರಗಳು ತ್ರಿದೋಷಗಳನ್ನು (ಗಾಳಿ, ಬೆಂಕಿ, ನೀರು) ಅಧೀನದಲ್ಲಿಟ್ಟುಕೊಳ್ಳಲು ಸಹಾಯ ಮಾಡುತ್ತವೆ. ಧಾರಣ, ಧ್ಯಾನ ಮತ್ತು ಸಮಾಧಿ ಇವುಗಳು ಮನಸ್ಸು, ಚಿತ್ತ ಮತ್ತು ಅಹಂಕಾರಗಳನ್ನು ನಿಯಂತ್ರಿಸುತ್ತವೆ.

ಒಟ್ಟಿನಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ ಮತ್ತು ಪ್ರತ್ಯಾಹಾರಗಳು ಯೋಗದ ಬಹಿರಂಗ ಸಾಧನೆಗಳು. ಇವುಗಳ ಅನುಷ್ಠಾನದಿಂದ ನಿರಂತರ ಧ್ಯಾನ ಮಾಡುವ ಶಕ್ತಿ ದೊರೆತು ಧ್ಯೇಯ ವಸ್ತುವಿನೊಂದಿಗೆ ಒಂದಾಗಿ ತನ್ನ ಸ್ವರೂಪವನ್ನು ಕಳೆದುಕೊಳ್ಳುವ ಅನುಭವ ದೊರೆಯುತ್ತದೆ. ಇದೇ ಸಮಾಧಿ ಎನಿಸುವುದು. ಸ್ವಾಮಿ ವಿವೇಕಾನಂದರು ಯೋಗದ ಬಗ್ಗೆ ತಮ್ಮ ಅಭಿಪ್ರಾಯ ತಿಳಿಯಪಡಿಸುತ್ತಾ "These Yogas have (Pranayama) Control of breath and meditation (dhyana) as their main Components. The spiritual aspirant is also advised to do Yogic physical exercises (Yogasanas). 'Yoga' thus Practiced brings about mental, emotional and physical integration in the seeker and makes him fit for spiritual enlightment" ಎಂದಿದ್ದಾರೆ.

ಡಾ|| ಗಂಗೂಲಿ ಮತ್ತು ಇತರೆ ವಿಜ್ಞಾನಿಗಳು ಈ ಯೋಗದ ಬಗ್ಗೆ ವಿಮರ್ಶಿಸುತ್ತಾ 'Spirituality and Science' ಎಂಬ ಪುಸ್ತದಕಲ್ಲಿ "these Practices and exercises are fully scientific as laid down in the ancient texts, their technical strength has suffered considerably during the last half century or so at the hands of Pseoduo - yogis in their egerness to simplify them or to find out short cuts on these difficult paths'' ಎಂಬುದಾಗಿ ವ್ಯಥೆಪಟ್ಟಿದ್ದಾರೆ.

ಈ ಯೋಗಶಾಸ್ತ್ರದ ವಿಚಾರದಲ್ಲಿ ಡಾ|| CarlJung ಎಂಬ ಸ್ವಿಸ್ ದೇಶದ ಪ್ರಖ್ಯಾತ ಮನಶ್ಯಾಸ್ತ್ರಜ್ಞನು ಈ ಕೆಳಕಂಡಂತೆ ಅಭಿಪ್ರಾಯ ಸೂಚಿಸಿದ್ದಾನೆ. ''There is good reason for yoga to have many adherents. It offers the possibility of controllable experience and thus satisfies the scientific need for facts, and besides this by reason of its breadth and depth, its venerable age, its doctorine and method, which include every phase of life, promises „Undreamt of possibilities. "

ಮುಂದುವರೆಯುತ್ತಾ ಡಾ|| ಜಂಗ್‌ರವರು "Yoga is, as I can readily believe, the perfect and appropriate method, fusing body and mind together, so that they form a Unity which is scarcely to be questioned. This Unity creates a psychological disposition which makes Possible intutions that transcend Consciousness" ಎಂದುಪ್ರಶಂಸಿದ್ದಾರೆ.

1948 ನೆಯ ಸಾಲಿನಲ್ಲಿ "world Foundation for Mental Health" ಸಮ್ಮೇಳನದಲ್ಲಿ Dr. Julian Huxley ಯವರು ಯೋಗದ ಬಗ್ಗೆ ಮಾತನಾಡುತ್ತಾ "Their foundation might as well look in to the mystic lore of the East. If this lore could be Investigated scientfically.............. I think immense step forword could be made in your field" ಎಂಬುದಾಗಿ ಸಂಶೋಧನೆಗೆ ಸಲಹೆ ನೀಡಿದ್ದಾರೆ.

ಇತರೆ ವಿಜ್ಞಾನಿಗಳೂ ಸಹ ಈ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸುತ್ತಿದ್ದಾರೆ. ಧ್ಯಾನ ದಲ್ಲಿ ನಿರತರಾದಾಗ ಸಮಾಧಿ ಸ್ಥಿತಿ ಪಡೆವವರೆಗಿನ ಹಂತಗಳನ್ನು E. E. G. (Electro Encephlogram) ಯಂತ್ರದಲ್ಲಿ ಬೀಟ, ಆಲ್ಫ, ತೀಟ, ಡೇಟ ಅಲೆಗಳನ್ನು ಗುರ್ತಿಸಿದ್ದಾರೆ.

ಡಾ.|| K. K. Datey ಎಂಬುವರು ಭಾರತದೇಶದಲ್ಲಿದ್ದ ಪ್ರಮುಖರಾದ ಒಬ್ಬ ಹೃದಯ ತಜ್ಞರು. ಇವರು ಯೋಗಾಸನಗಳ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ಇವರ ವೈಜ್ಞಾನಿಕ ತೀರ್ಮಾನದಂತೆ These results based on experimental data showed that a number ailments Could be cured by these yogic exercises .. a malady like hipertension can be cured by practicing Savasana. (Death posture) Dr. Datey regretted that this rich heritage of India has not received in its own country the attention it deserves from the stand point of View of research although Yoga is becoming increasingly Popular in the west.

ಅಲೋಪತಿ ಪದ್ಧತಿಯ ಪ್ರಸಿದ್ಧ ವೈದ್ಯರಾದ ಡಾ|| ಕೃಷ್ಣರಾಮರ್ರವರು 1987 ನೆಯ ಸಾಲಿನಿಂದ ಅನೇಕ ಶಾರೀರಕ ತೊಂದರೆಗಳಿಗೆ ಯೋಗಾಭ್ಯಾಸ ವನ್ನೇ ಅಭ್ಯಸಿಸಲುಹೇಳುತ್ತಿದ್ದಾರೆ. ಅವರ ಸ್ವಂತ ಅನುಭವದಿಂದ ಈ ರೀತಿ ಅಭಿಪ್ರಾಯಸೂಚಿಸಿದ್ದಾರೆ. Asanas are not merely gymnastic exercises. They are Postures maintained for a certain Period of time, they lend and develop agility, balance, endurance and vitality. Put together the "Asana–Pranayama" as they are Called, increases immunity and resistance reduce the severity of the disease and also reveals the hidden cause of inevitable disease stored for the future."

Dr. Raman further says, Speicific Asanas Practiced regularly rinse, dry and flush the Coronary arteries, thus totally Preventing Clogging.

Dr Sundari Menon, mother and child specialist, is convinced that Yoga is a boon.

Dr. Kalyani Nityanandam Cordiologist says from her own experience as follows, "It was through Yoga that I rid myself of killing pain in the Knees, legs shoulders and neek. I had exhausted all avenues of Cure when I decided to try yoga as a therapy. Now I have miraculously regained agility. Mrs" Kalyani attest Dr. Raman's views on the Curative effects of Yoga in the cases of heart diseases also.

(Hindu–Dt 8-12-91)

ವಿಶ್ವಮಾನ್ಯತೆ ಪಡೆಯುತ್ತಿರುವ ಈ ಯೋಗ ಶಾಸ್ತ್ರದ ಬಗ್ಗೆ ಅನೇಕ ವಿಜ್ಞಾನಿಗಳು ಅಭಿಪ್ರಾಯಪಟ್ಟಿರುವುದನ್ನು ಪರಿಶೀಲಿಸಿದಾಗ ಈ ಶಾಸ್ತ್ರವು ವೈಜ್ಞಾನಿಕ ಆಧಾರದ ಮೇಲೆ ರಚಿತವಾಗಿದೆ ಎಂಬುದು ಎಲ್ಲರಿಗೂ ವೇದ್ಯವಾಗುತ್ತದೆ. ಇವೆಲ್ಲವೂ ಬಹಿರಂಗ ಸಾಧನೆಗಳ ಬಗ್ಗೆ ಮಾತ್ರವೇ ಸೂಚಿಸಿರುವ ಅಭಿಪ್ರಾಯಗಳಾಗಿವೆ ಈ ಶಾಸ್ತ್ರದ ಆಂತರಿಕ ಸಾಧನೆಗಳ ಬಗ್ಗೆಯೂ ಸಹ ಸಂಶೋಧನೆ ನಡೆದು ಇಡೀ ವಿಶ್ವಕ್ಕೆ ಇದರ ಮಹತ್ವ ಅರಿವಾಗಲೆಂದು ಆಶಿಸೋಣ.

---

# ಬಸವ ತತ್ತ್ವ ರತ್ನಾಕರ - ೧೦

ಶ್ರೀ ಮೋಟಗಿ ಮಲ್ಲಿಕಾರ್ಜುನ, 'ಕನ್ನಡಕವಿ ಕಾಳಿದಾಸ', ಅಥಣಿ, ಬೆಳಗಾವಿ ಜಿಲ್ಲೆ.

"ರೇಚಣ್ಣನ ಪರಾವತಾರಿ"

ಕುಲಪತಿ ಡಾ|| ಆರ್. ಸಿ. ಹಿರೇಮಠರನ್ನು ಕುರಿತು

**ಪ್ರಸಾದವಾಣಿ :** [94]

"ರೇಚಣ್ಣನಪರಾವತಾರಿ, ಅಣ್ಣಯ್ಯ !
ನಿಮ್ಮ 'ಪ್ರಸಾದವಾಣಿ'ಗೆ ಬಾಯ್ದೆರೆವನಲ್ಲದೆ,
ಮತ್ತೊಂದಕ್ಕೆ ಆನು ಬಾಯ್ದೆರೆಯೆನಯ್ಯ !
ಜನ್ಮಜನ್ಮಾಂತರದ ಆ ಶರಣ ಸಂಕುಳದ ನೆನಹಿನೊಡನೆ,
ನಿಮ್ಮಸುಳುಹಿನಲ್ಲಿ ನಾನಿದ್ದೆನಯ್ಯಾ !
ಡೋಹರ ಕಕ್ಕಯ್ಯನಾ ಪ್ರಸಾದಕ್ಕೆ ಅಂದು,
ಭಕ್ತಿ ಭಂಡಾರಿ ಬಸವಣ್ಣ ಕಾಯ್ದುಕೊಂಡಿಪ್ಪಂತೆ,
ನಾನಿಂದು, ನಿಮ್ಮ ಪ್ರಸಾದವಾಣಿಗೆ ಕಾದು ಕುಳಿತಿಹೆನಯ್ಯ.
ಅಣ್ಣಯ್ಯ ಕರುಣಿಪಂತೆ ಮಾಡಯ್ಯ
ಶ್ರೀಶೈಲ ಮಲ್ಲಿಕಾರ್ಜುನ."

**ಆತ್ಮಬಂಧುದರ್ಶನ :** [95]

"ನಾನೊಂದು ಕನಸುಕಂಡೆ ನೋಡಯ್ಯ !
ರೇಚಣ್ಣನಪರಾವತಾರಿ ಅಣ್ಣಯ್ಯ ಕೇಳಯ್ಯ:
ಕಲ್ಯಾಣಪಟ್ಟಣದ ಹೊರವಲಯಲ್ಲೊಂದು ಮಠವುಂಟು !
ಅಲ್ಲಿ ಕಂಗೊಳಿಪ ಗದ್ದುಗೆಯ ಹಿಂದುಗಡೆ ನೀ ವಿರ್ಪಾಗ,
ಮಾಡೊಳಲ್ಲಿ ಬೆಳಗುತಿಪ್ಪಾ ಹಣತೆಯೊಂದುಂಟು.
ಹತ್ತುಗಂಟೆಗೆ ರಾತ್ರಿ ಮಿಕ್ಕಿತ್ತು.
ನಾ ದಾರಿಯ:ಲಿ ಸಾಗಿರಲಲ್ಲಿ ಹಣತೆ ಬೆಳಕು ಕಾಣಬಂದಿತ್ತು.
ಕಣ್ತುಂಬಿನೋಡ್ದೆ ಅಲ್ಲಿ ನಿಮ್ಮ ಸಾಕಾರಮೂರ್ತಿ ಚಿತ್ರವೆ ನಿಂದಿತ್ತು.
ಏನುಹೇಳಬೇಕು ಪ್ರಿಯ ಅಣ್ಣಯ್ಯ !
ನಾನೋಡುತಿರುವಂತೆ ನೀ ಮಾಯವಾಗಬೇಕೇನಯ್ಯ ?

ನೀ ಬಲುಮಂತ್ರಮಾಟಗಾರ ನೋಡಾ ಅಣ್ಣಯ್ಯ !
ಮಹಾಲಿಂಗಪ್ರಭುವೆ ಈ ಪರಿ ಸರಿಯೆ ?
ನೀವೇ ಹೇಳಾ.ಶ್ರೀಶೈಲಮಲ್ಲಿಕಾರ್ಜುನ.''

**ಸಪ್ತ ಸಾಹಿತ್ಯಸಾಗರಂಗಳುತ್ಪತ್ತಿ : [96]**

''ಚನ್ನಬಸವಣ್ಣನಾಣತಿಯಂತೆ ನೀವಂದು,
ಭುವನಪಾವನಂಗೊಳಿಸಲೆಂದುಳಿದಿರಯ್ಯ.

ಅದುವೆ, 'ಶಿವಧರ್ಮತತ್ತ್ವ'ಬೀಜಂಗಳಂ ಬಿತ್ತುವೆ-
(ಉಳಿವೆ) 'ಉಳುವೆ' ಎನ್ನುವುದರ ರಹಸ್ಯ ತಿಳಿದು
'ಕುರಹು' ಕಾಣ ಬಂದಿತ್ತು ನೋಡಯ್ಯ.

ಮಹಾಜ್ಞಾನನಿಧಿಚಿಕ್ಕದಣ್ಣಾಯಕರ ಕೃಪೆಯಿಂದೆ
ನೀವಿಂದು, ಸಪ್ತಸಾಹಿತ್ಯಸಾಗರಂಗಳನೆ-
ರಚಿಸಿ ಸೃಷ್ಟಿಗೆ ನೀಡಿದಿರಲ್ತೆ ? ಅಣ್ಣಯ್ಯ !
'ಶಿವಶಾಸನ'ದಗುಟ್ಟು ನರರೆಂತು ತಿಳಿವರಯ್ಯ.

ವಚನ ವಾಙ್ಮಯ ವಾರಿಧಿಯೊಂದು, ಮೇಣ್‌ಕಾವ್ಯಾಂಬುಧಿಯೊಂದು,
ಸಾಹಿತ್ಯಶರಧಿಯೊಂದು, ವೇದಾಗಮೋಪನಿಷತ್‌ಸಾರ ಸಾಗರಮೊಂದು,
ಸರ್ವಧರ್ಮತತ್ತ್ವಾಂಬುಧಿಮಗುದೊಂದು, ಜನಪದಗೀತಸಮುದ್ರ ಮತ್ತೊಂದು,
ನವರಸಾಲಂಕಾರ ನಾಟ್ಯಶಾಸ್ತ್ರ ಶರಧಿಯಿನ್ನೊಂದು,

ಇಂತೀಸಪ್ತಸಾಗರಂಗಳುದಯಕ್ಕೆ
ನೀವೆ ಕಾರಣಪುರುಷಕಾಣಯ್ಯ !

ಅಣ್ಣರೇಚಣ್ಣ ನಿಮ್ಮೀಘನಮಹಿಮೆಯಕಂಡು ಬೆರಗಾದೆನಯ್ಯ !
ಮಹಂತಮಹಾಲಿಂಗಮೂರ್ತಿಕರುಣಾಸಿಂಧು
ಕಾಣಾ, ಶ್ರೀಶೈಲಮಲ್ಲಿಕಾರ್ಜುನ."

**ಶ್ರೀಬಸವೇಶ್ವರ ಕೃಪಾದೃಷ್ಟಿ : [97]**

"ಅಕ್ಷಯ್ಯತೃತೀಯೆಗೆ ನಿಮ್ಮ 'ಪ್ರಸಾದವಾಣಿ'-
ಯೆನಗೆ ಲಭಿಸಿತ್ತು ನೋಡಯ್ಯ! ಪಡೆದಾನು ಧನ್ಯನಾದೆನಯ್ಯ!
ಇಂದೆನಗೆ ಅಮೃತಯೋಗ ಅಣ್ಣಯ್ಯ!
ಜಗದಣ್ಣ ಬಸವಣ್ಣನಾ ಕರುಣ ಕಾಸಾರದೊಳಾನಂದದಿಂ

ನಿಂದು ವಿಂದು ಚೆಂದದಿಂದಾನೊಲಿದು ನಲಿದಾಡಿದೆನಯ್ಯ!
ಶರಣು ಶರಣಾರ್ಥಿ ಅಣ್ಣಾಯ್ಯ!
ಮತ್ತೆ ಬಸವ ಮಹಿಮೆಯನುಸುರುವಾ ಸೇವೆಯಿಂದೆ
ಎನಗೆ ಕೂಡಿ ಬಂದಿತ್ತು ನೋಡಾ!
ರೇಚಣ್ಣನಪರಾವತಾರಿ ಅಣ್ಣಯ್ಯ ನಿಮ್ಮ 'ಪ್ರಸಾದವಾಣಿ'ಯ
ಮಹತ್ವವಿಲ್ಲಿ ತೋರಬಂದಿತ್ತು ನೋಡಾ.
ಕೃಪಾಳು ಶ್ರೀಗಿರೀಶ ತಂದೆಯೆ!
ಅಣ್ಣಯ್ಯ ಪ್ರಸಾದವಾಣಿ ಕರುಣಿಸಿಂತೆ ಮಾಡಿದೆಯಯ್ಯ
ಕೋಟಿ ನಮನ! ಶ್ರೀಶೈಲ ಮಲ್ಲಿಕಾರ್ಜುನ"

**ಕನ್ನಡದ ಕೈವಲ್ಯ:** [98]

"ಸತ್ಯ ಶರಣರಾ ಸುಳುವು ಮರ್ತ್ಯರೆತ್ತ ಬಲ್ಲರಯ್ಯ!
ಅನುಭಾವಿಗಳ ಮಹಿಮೆಯನು ಅನುಭಾವಿ ಶರಣರೆ ತಿಳಿವರಯ್ಯ!
ಸ್ತುತಿ-ನಿಂದೆಗಳು ಬಂದೊಡು ಕದಲದೆ ಸಮಚಿತ್
ಶಾಂತಿಯುತರಾಗಿಹರು ನಮ್ಮ ಶಿವಶರಣರು!
ನಮ್ಮ ಅಣ್ಣಯ್ಯನೆಂತಹನೆಂಬುದನು ಕೇಳಿರೊ;

ಅನಂತ ಶಕ್ತಿ ಸೌಭದ್ರನು, ಸತ್‌ಚಿತ್ ಆನಂದ ಸಾಗರನು,
ನಿರ್ಮಲ ಹೃದಯಶರಧಿಯಪಾರನು, ಪ್ರಬುದ್ಧ ಮಾನಸನು,
ವಿಶ್ವವಿಶಾಲ ದೃಷ್ಟಿ-ಧೀರನು, ಮಿತಭಾಷಿ-ಗಂಭೀರನು,
ಮೇರು ಸದೃಶ ವಿದ್ಯಾಧರನು, ಅನುಭಾವ ಸಾಗರನು,

ಪ್ರಮಥಾನುರಾಗಿ, ಸಂಸಾರಿ ಎಂಬೆನೆ ಮಹಾವಿರಾಗಿ,
ಶರಣ ಜೀವನ ಭೋಗಿ, ಪರಮಾರ್ಥ ಪೂರಿತಯೋಗಿ,
'ಕನ್ನಡದ ಕೈವಲ್ಯ, ಅಣ್ಣಯ್ಯ ನಿಮ್ಮಿಂದ ಕೈ ಸಾರಿತ್ತು.
ವಚನವಾಙ್ಮಯ ವೃಕ್ಷ ಪಲ್ಲವಿಸಿ ಸುಮಧುರ ಫಲ ನೀಡಿತ್ತು.
ಶರಣರೊಡವೆ ಶರಣರಿಗೆ ಸಂದಿತ್ತು ನೋಡಾ!
ಧನ್ಯ ! ಧನ್ಯ ! ರೇಚಣ್ಣನಪರಾವತಾರಿ ಅಣ್ಣಯ್ಯ–
ತವ ಭುವಿಯ ಶಿವಕಾರ್ಯ ಸಫಲವಾಯಿತ್ತು ನೋಡಾ !
ಶರಣು ಶರಣಾರ್ಥಿ ನಿಮ್ಮಡಿಗಳಿಗೆ! ಶ್ರೀಶೈಲ ಮಲ್ಲಿಕಾರ್ಜುನ"

ರೇಚಣ್ಣನಪರಾವತಾರ: [99]

"ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನಾ ಕಾರುಣ್ಯ ಮೂರ್ತಿ ಅಣ್ಣಯ್ಯ !
ಅಂತರ್ ರಾಷ್ಟ್ರಗಳಿಗೂ ಖ್ಯಾತಿ ಹರಡಿ ಬಾನಂಚಿಗೇರಿ ಬೆಳಗಿತ್ತು ನೋಡಾ ತವಕೀರ್ತಿ !

ಆರ್. ಎಂದಡೆ ಷಡುಸ್ಥಲ ಮೂರ್ತಿ ಆರುಸ್ಥಲಗಳ ರಹಸ್ಯ ಪೂರ್ತಿ
ಸಿ. ಎಂದಡೆ ಶಕ್ತಿ-ಭಕ್ತಿ ಶಿವನಲ್ಲಿ ಸಂಪೂರ್ಣ ಸಂಪ್ರೀತಿ
ಹಿರೇಮಠ. ಎಂದಡೆ ಶಿವಶರಣರ ತತ್ತ್ವಾನುಭವ
ದಾಸೋಹದ ಮಹಾಮನೆಯಲ್ತೇ ?
ಸುಂದರ ಅಭಿದಾನದ ವ್ಯಾಪ್ತಿ ವ್ಯಾಖ್ಯಾನವಿಂತು !
ಅಂದಿನಾ ಬಸವಾದಿ ಶರಣ ಸಂದೋಹದೊಳಿರ್ದ "ರೇಚಣ್ಣ ತಂದೆ"
ಇಂದು "ಡಾ. ಆರ್. ಸಿ. ಹಿರೇಮಠ" ಮಮ ಆತ್ಮ ಬಂಧು!
ಇಂದುಧರನಾಣೆ ! ಸತ್ಯ ! ಶಿವಶಕ್ತಿ ನುಡಿಸಿದೀ ಆರು ವಚಸಾಮೃತ-
ಅಂದಿನಾ ಪ್ರಮಥಾಚಾರಿ "ಚೆನ್ನಮಲ್ಲಿಕಾರ್ಜುನ" ಶರಣ ಸಂಪ್ರೀತ
ಇಂದು ವಚನಕಾರ "ಕನ್ನಡ ಕವಿ ಕಾಳಿದಾಸ" ಪ್ರಣೀತ !
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ"

## "ಧರ್ಮಜ್ಞಕವಿ"ಗೆ ದೇವಪ್ರಶಸ್ತಿ

**ಪರಶಿವ ಪ್ರಶಸ್ತಿ ಪ್ರಧಾನ : [100]**

" ಯಾರೆನ್ನ ಹೃದಯದೊಳು ಬಂದು ತಾ ನೆಲಸಿಹರೊ !
ಯಾರೆನಗೆ ಭುವನ-ಬಾನಗಳಾಚೆಗಿನಾಳವನು ||
ತೋರಿದರೊ ಅಂತಹಗೆ ನಾನಮಿಪೆ !ಧರ್ಮಜ್ಞ" ||15||

ನಾಗಭೂಷಣನನುಗ್ರಹದಾ ಪ್ರಶಸ್ತಿ ಪಡೆದಿರುವಾತಂಗೆ,
'ಪದ್ಮಶ್ರೀ' 'ಪದ್ಮಭೂಷಣಂ'ಗಳ ಹಂಗೇತಕಯ್ಯ !
ಮನೆಯಂಗಳದಿ ಹಾಲು ಹೊಳೆ ಹರಿಯುತಿರಲು
ಬೇರೆ ಹೊಳೆಹಳ್ಳಗಳ ಬಯಸಿ ನಾ ಹೋಗಲೇಕಯ್ಯ !
ಆಗಸದಿಂದಾ ಇಳಿದು ಬಂದ ಸ್ವಾತ್ಮಗಂಗೆ
ತಾನೀ ದೇಹವೆಂಬಾ ಧರಣಿಯೊಳವತರಿಸಿ ಸಾಗಿ ಹರಿಯುತ್ತೆ
ಅನಂತಪಾರ ಹೃದಯಾಂಬರದ ಮೇಲೆ
ಕೋಟಿ ರವಿ ತೇಜವಾಂತು ಬೆಳಗುತಿಪ್ಪಾ
ಪರಮಾತ್ಮ (ಪರಶಿವ) ಶರಧಿಯ ಸೇರಿನಿಂದ ಆತ್ಮಗಂಗೆ
ಶಂಭು ಸಾಗರವೆ ತಾನಾದಪರಿ ನಾನೇನೆಂಬೆ
ನೀನೆ ಹೇಳಾ ! ಶ್ರೀ ಶೈಲ ಮಲ್ಲಿಕಾಜುನ."

**ಸುಜ್ಞಾನ ಪೀಠ : [101]**

“ಆ ಪೀಠಪ್ರಶಸ್ತಿ ಈ ಪೀಠಪ್ರಶಸ್ತಿ ಹಿರಿದೆಂದು ಪೇಳುತ್ತೆ,
ಅದಕಾಗಿ ಅರೆಮರುಳು ಕವಿಗಳೆಲ್ಲ ಕರುಬಿ ಕಾದು ಕಚ್ಚಾಡಿ
ಕಳವಳಗೊಂಬುದನು ಕಂಡು, ಎನ್ನಂತರಂಗದ-
ಆತ್ಮಾರಾಮು ಗಹಗಹಿಸಿ ನಗುತಲಿರ್ದ ನೋಡಾ.
‘ಸುಜ್ಞಾನಪೀಠ’ ಹೃದಯಮಧ್ಯದೊಳಗಿಪ್ಪುದು ನೋಡಾ.
ಹೊರಗಣ ಪೀಠಂಗಳೆಲ್ಲ ರಂಜನೆಯು ಮಾತಿನ ಅಪಕ್ವ
ಅಶಾಶ್ವತವಿದ್ಯಾ ಮಂಟಪಗಳು ನೋಡಾ.
ಪರಶಿವ ಜ್ಞಾನರತ್ನ ಪೀಠಸ್ಥನಾಗಿ ಸದಾನಂದ ಸಾಗರದಿ
ಮುಳುಗೇಳ್ದ ಮಹಾನುಭಾವಿಯ ಆತ್ಮ ‘ಶಿವಬೀಜ’ ವಾಗಿರ್ದು
ಬೆಳಗುತೊಳಗೆ ರಾಜಿಸುತಿರ್ದನು ನೋಡಾ !
ತ್ರೈಲೋಕಂಗಳೊಡೆಯ ತಾನಾಗಿ, ಸ್ವಯಂಭು ಕರ್ತ ತಾನೆನಿಸಿ
ಅಖಂಡ ರಾಜತೇಜದೊಳು ಬೆಳಗುತಿಪ್ಪನು ನೋಡಾ !
ಪರಶಿವ ತತ್ವಜ್ಞಾನಾನುಭವ ವಚನಾಮೃತವಿಂತಿರಲು,
ಇದನುಳಿದ–ಬಹಿರಂಗದಾಡಂಬರದಾ ಬಾಯ್ಮಾತುಗಳೆಲ್ಲ
ಅಂತಃಶುದ್ಧಿಯ ಕೊರತೆಯ ತಂದುವಲ್ಲದೆ,
ಆತ್ಮಾಭಿವೃದ್ಧಿಗೆ ಅಡ್ಡಿಯಾದುವು ನೋಡಯ್ಯ!
ಹೊರಗಣ ಪೂಜೆ,ಹೊರಗಣ ಜ್ಞಾನ, ತೋರಿಕೆಯ ಧರ್ಮಗಳೆಲ್ಲ
ಅಜ್ಞಾನದ ಹೊರೆ, ತಲೆಭಾರದ ಕುರುಹು, “ಭವ ಬೀಜ”
ಕಾಣಾ ! ಶ್ರೀ ಶೈಲ ಮಲ್ಲಿಕಾರ್ಜುನ ”

**ವಿಶ್ವ ಸಾಹಿತ್ಯ : [102]**

“ಪುಡಿಗಬ್ಬಗಳು ಮಹಾಕಾವ್ಯಗಳೆನಿಸುವುವೆ ?
ಗೂಬೆ ಹಕ್ಕಿ ಹಾರಾಟಗಳಾ–ರಸಭಾವ ರಹಿತ
ಹಾಳು ಕೃತಿಗಳೆಲ್ಲ ಸಾಹಿತ್ಯವಾಗ ಬಲ್ಲುವೆ ?
ಕಾಗೆ ಮರಿಗೆ ಕೋಗಿಲೆಯೆಂದಂತಾಯಿತ್ತು ನೋಡಾ !
ನವ್ಯ ಸಾಹಿತ್ಯ ಸತ್ವಯುತವಾಗಬೇಕಲ್ಲದೆ
ಶಕ್ತಿ ಹೀನವಾಗಬಾರದು ನೋಡಾ!

ಪ್ರಾಚೀನ ಪ್ರೌಢಕಾವ್ಯ ಸಾಹಿತ್ಯ ಬೆಳೆದು ಬರಬೇಕಯ್ಯ !
ವೇದೋಪನಿಷತ್ ಕೃತಿರತ್ನಗಳೆಲ್ಲ ಅಪೌರುಷೇಯಗಳಾಗಿರ್ದೊಡು
ಅವು ಅಮೃತ ಪ್ರಾಯವಾಗಿ ನಿಂತಿಹವು ನೋಡಯ್ಯ !
ಶಿವಶರಣರಾ ಅನುಭಾವ ಸಾಗರದ ವಚನ ವಾಙ್ಮಯವಿಂದು
ವಿಶ್ವಸಾಹಿತ್ಯವೆನಿಸಿ ಅಮೃತವೃಷ್ಟಿಗರೆಯುತಿಹುದು ಕಂಡಯ್ಯ !
ತ್ರಿಕಾಲಾಬಾಧಿತ ಸತ್ ಶಕ್ತಿ ಶಾಶ್ವತ ! ಶಿವಭಕ್ತಿ ಸತ್ವಯುತ !
ಸತ್ಯಂ ಶಿವಂ ಸುಂದರಂ ದೇವವಾಣಿ ಅಮೃತ !
"ಕನ್ನಡಕವಿ ಕಾಳಿದಾಸ"ವಚನ ಕಾವ್ಯಾಮೃತ !
ಕೇಳಾ, ಶ್ರೀ ಶೈಲ ಮಲ್ಲಿಕಾರ್ಜುನ"

ಪ್ರಸಾದ ಕಾಯ : [103]

"ಎನ್ನ ಹೊಗಳಿ ಹೊಗಳಿ ಹೊನ್ನ ಶೂಲಕಿಕ್ಕಿದರಯ್ಯ'
ಎಂಬೀ ಮಹಾನುಭಾವಿ ಬಸವಣ್ಣನಾ 'ಅಮೃತವಾಣಿ' ಯನು
ನೀವು ಕೇಳಿ ಅರಿಯಿರೊ !
ವೃಕ್ಷ ಬೆಳೆಯುವ ಮುನ್ನವೆ ಕಡಿಯಬಹುದೆ ?
ಇದರ ಮರ್ಮವ ತಿಳಿದು ನಡೆಯಿರೊ!
ತನ್ನ ಹೊಗಳಿಕೆಗೆ ತಾನೆ ಆಶೆ ಪಡುವಲ್ಲಿ
ತನ್ನ ಹಿರಿತನದ ಕೊರತೆ ಕಾಣಬಂದಿತ್ತು ನೋಡಾ!
ಸುವರ್ಣದ ಶೂಲವಾದಡೇನು ?
ಅದು ಇರಿಯದೆ ಮೊಣ್ಬುದೆ ಹೇಳಾ !
ಆತ್ಮ ಪೌರುಷದ ಅಪೇಕ್ಷೆ ಅನುಚಿತವಲ್ಲದೆ,
ಆತ್ಮೋದ್ಧಾರಕ್ಕೆ ಅನುಕೂಲವಾಗದು ನೋಡಾ !
ಶಿವನ ಪ್ರಸಾದ ಕಾಯವಿದನು ಕೆಡಿಸದೆ,
ತುಂಬ ಸಾರ್ಥಕ ಪಡಿಸಿ 'ಅಮೃತ ಕಾಯ"
ಗೊಳಿಸುವಂತೆ ನೀವೆ ಕರುಣಿಸಾ
ತಂದೆ ! ಶ್ರೀಶೈಲ ಮಲ್ಲಿಕಾಜುನ."

**ಶಿವಲಿಂಗತನಯುವಾಣಿ [104]**

" ಒಬ್ಬರೆ ಕವಿ, ಇಬ್ಬರೆ ಸಾಹಿತಿ, ಇಂತೀ ಮೂವರು
ಸೇರಿ ಒಂದೆಡೆಗೆ ಮಸಲತ್ತು ಮಾಡಿದರು;
ಸಾಂಗಲಿಯೊಳಗಧ್ಯಕ್ಷ ನಾನಾಗುವೆ! ಒತ್ತಿ ಹೇಳುತ್ತಲ್ಲಿ
ನೀವೀರ್ವರು ಎನ್ನನು ಚೆನ್ನಾಗಿ ಹೊಗಳುವಿರಲ್ತೆ?
ಧಾರವಾಡದ ಸಭೆಯಲ್ಲಿ ಅಧ್ಯಕ್ಷ ನೀನಾಗುವೆ !
ನಾವೀರ್ವರೂ ನಿನ್ನನು ಉತ್ತರಿಸಿ ಹೇಳುವೆವು.
ಹುಬ್ಬಳ್ಳಿಯೊಳು ಅವ ಅಧ್ಯಕ್ಷನಾಗುವ!
ಉಬ್ಬಿಸಿ ನಾವಿಬ್ಬರೂ ಮಾತಾಡೋಣ!
ಇಂತೀ ಕುತಂತ್ರೀ ತ್ರಿಮೂರ್ತಿಗಳ ಸಂಚು;
ಈ ಬಗೆಯ ಸೋಗಿನಾ ಲೋಕತಿದ್ದುವರ ಹೊಂಚು!
ಮುಂಚೆ ತಿಳಿದಾ ಉದ್ದಾಮಕವಿ ರೈನಾಪೂರ್ ಶಿರಸ್ತೇದಾರ್
ಲಿಂ|| ಮಲ್ಲಿಕಾರ್ಜುನರ್*"ಶಿವಲಿಂಗತನಯ' ರೊರೆಯಲ್ಕೆ
ಈ ವಂಚನೆಯ ಸಂಚನ್ನು ಮಿಂಚಿಸಿದ ಧರ್ಮಜ್ಞಕವಿ
ಕೇಳಾ ಶ್ರೀ ಶೈಲ ಮಲ್ಲಿಕಾರ್ಜುನ "

**ಶಿವಕಾರುಣ್ಯ: [105]**

" ಮೇದಿನಿಗೆ ಬಂದ ಕವಿಕಾರ್ಯ ಸಫಲಮಾಯಿತ್ತು ನೋಡಾ.
ಭಕ್ತಿ ಬಳಿವಿಡಿದು ಕೈಲಾಸ ಬಾಗಿಲಿಗೆ "ಧರ್ಮಜ್ಞಮೂರ್ತಿ"
ಸಾಧಿ ಬಂದಿರಲು, ಭಾಳಾಕ್ಷ(ಶಿವ)ನು ಹದುಳದಿಂ ಬಾ ಎನ್ನಯ
ಕಂದಾ ಎಂದು ಮುತ್ತಿಟ್ಟು ಬಿಗಿದಪ್ಪಿ ಮೈದಡವಿ ಕರುಣೆಯಿಂ
ಕರವಿಡಿದೆತ್ತಿಕೊಂಡನಯ್ಯ ! ಶ್ರೀ ಶೈಲ ಮಲ್ಲಕಾರ್ಜುನ "



ಟೀ ಪು. 1 ಭಕ್ತಮಹಾತ್ಮ್ಯ

" ಭಕಾರಾದ್ಭವ ಇತ್ಯುಕ್ತಃ ಕಕಾರಾತ್ಕಲುಷಂ ಭವೇತ್
ತತಃ ಸಂತ್ರಾಯತೇ ತಸ್ಮಾದ್ಭಕ್ತ ಇತ್ಯುಚ್ಯತೇ ಬುಧೈಃ ।
ಭಕ್ತಸೇವಾಸಮಂ ಪುಣ್ಯಂ ನಾಸ್ತಿ ನಾಸ್ತಿ ನಗಾತ್ಮಜೇ
ಭಕ್ತದ್ರೋಹ ಸಮಪಾಪಂ ನ ಭೂತಂ ನ ಭವಿಷ್ಯತಿ ॥"
— ಸೂಕ್ಷ್ಮಾಗ

"ಗುರು - ಲಿಂಗ-ಜಂಗಮರ ಮಹಾತ್ಮ್ಯವನ್ನು ಹೇಳಿದಂತೆ ಭಕ್ತಮಹಾತ್ಮ್ಯವನ್ನೂ ಆಗಮ ಗಮನಿಸಿ ಹೇಳಿ ತನ್ನ ಸಮದರ್ಶಿತ್ವವನ್ನು ಸಾಟಿದೆ. ಭಕ್ತಸ್ಥಲ ವೈಶಿಷ್ಟ್ಯ ಅಂದೇ ವಾಗಿ ನಿರ್ಣಯವಾಗಿದೆ. ಈಚಿನವರು ಆ ನಿಟ್ಟಿನಲ್ಲಿ ಯಾರೂ ಏನೂಮಾಡಿಲ್ಲ. ಎಲ್ಲವೂ ನದೇ ಆಗಿದೆ. ಭಕ್ತ ಮೌಲ್ಯವನ್ನು ಆಗಮ ಉಗ್ಗಡಿಸಿದೆ.

ಭಕ್ತಪಥದ ಆಗಮಿಕ - ಭಕ್ತಪಥದ ವ್ಯುತ್ಪತ್ತಿ ಪರಿಣತಿಆಗಮಕ್ಕೆ ಸೇರಿದ್ದು. ಭಕ್ತಭವ ವಿಮುಕ್ತ. ರಕ್ತ ಭವದೋಷ ಬದ್ಧ - ಭವಬಂಧನ ಜೀವಭಾವಗಳಿಂದ ಮುಕ್ತನಾದಕಾರಣ ಹಿರಿಮೆಯುಂಟು. ಘನತೆಯುಂಟು ಜೊತೆಗೆ ಪ್ರಾಚೀನತೆಯುಂಟು ಆಗಮೋಕ್ತವಾಗಿ! ಆದಿ ಸಾಹಿತ್ಯ ಆಗಮ. ಆದಿಭಕ್ತ ಸಿದ್ಧಾಂತ ಆಗಮದಲ್ಲಿ! ಅಂತೆಯೇ ಷಟ್‌ಸ್ಥಲದ ಆದಿ ಸ ಆದಿಸಿದ್ಧಾಂತ ಶಿವಾಗಮ. ವೀರ ಶೈವ ಸಾಹಿತ್ಯವೂ ಸಿದ್ಧಾಂತವೂ ಶಿವಾಗಮವೇ ಆಗಿದೆ. ಶೈವವು ನಿನ್ನೆ ಮೊನ್ನೆ ಹುಟ್ಟಿಲ್ಲ. ನೂರು ಸಾವಿರ ವರ್ಷಗಳ ಕಾಲದ್ದಲ್ಲ. ಹರಪ್ಪ ಮೊಹೆಂಜೊ ಸಂಸ್ಕೃತಿಗಿಂತಲೂ ಹಿಂದಿನದು. ಈ ಸಂಸ್ಕೃತಿಯನ್ನು ರೂಪಿಸಿದ ರುದ್ರನಕಾಲ ದಿಂದ ಬಂ ಪಶುಪತಿ ಮತದ ಮೂಲದಿಂದ ಬಂದುದು ಪಶುಪತಿ ಮತವೇ ವೀರಶೈವಲಿಂಗವಂತಿಕೆಗೆ ಪ ಮೂಲ ಭಕ್ತವಂತಿಕೆಗೆ ಬುನಾದಿ.

ಮಹಾತ್ಮ್ಯ ಅಂದರೆ ಘನತೆ ಗುರು-ಲಿಂಗ-ಜಂಗಮರಿಗೆ ಮಾತ್ರ ಮೀಸಲಲ್ಲ. ಭಕ್ತನ ಅರ್ಹನು; 'ಆದ್ಯನು. ಮಹತ್ವ ಮತ್ತು ಮಹಿಮೆ ಬರಲು ಭಕ್ತಿಯೇ ಕಾರಣ. ಅಂದರೆ ಶ ಕಾರಣ. ಶ್ರದ್ಧೆವಹಿಸಿ ಸಾಧನಮಾಡದಿದ್ದರೆ ಯಾವ ಸಾಮರ್ಥ್ಯವೂ ಬಾರದು. ಯಾವಪ್ರ ಬಾರದು. ಮಹಾತ್ಮ್ಯ ಅಥವಾ ಮಹತ್ವ ಮೈಗೂಡದು. ಮಹಿ ತತ್ತ್ವಕ್ಕೆ ಮೂಲ ಭ ಯುಳ್ಳವ ಭಕ್ತ, ಭಕ್ತಿ (ಶ್ರದ್ಧೆ) ಯಾರಿಗೆ ಬೇಡ ? ನಿಷ್ಠಾಭಕ್ತಿಯಿಲ್ಲದೆ ಮಹೇ ಅವಧಾನ ಭಕ್ತಿಯಿಲ್ಲದೆ ಪ್ರಸಾದಿಯಾಗನು. ಅನುಭವ ಭಕ್ತಿ ಯಿಲ್ಲದೆ ಪ್ರಾಣಲಿಂಗಿಯಾಗನು ಭಕ್ತಿಯಿಲ್ಲದೆ ಶರಣನಾಗನು. ಸಮರಸ ಭಕ್ತಿಯಿಲ್ಲದೆ ಐಕ್ಯನಾಗನು. ಕ್ರಿಯೇ ಜ್ಞಾನ ಶ್ರದ್ಧೆ ಯಿಲ್ಲದಿದ್ದರೆ ಮಹಾತ್ಮನಾಗನು, ಮಹಾನುಭಾವನಾಗನು. ಸತ್‌ಸಾಧಕರೆಲ್ಲರು ಭಕ್ತ ಅಂದರೆ ಭಜಕ. ಭಜಿಸುವಾತನು ಭಜಕ ಅಥವಾ ಭಕ್ತನು. ಭಜಿಸುವಿಕೆ ತ್ರಿ ಬರೀ ವಾಕ್ಕಿನಿಂದ ಸುತ್ತಿ 'ಎವುದೊಂದೆ ಭಜಿಸುವಿಕೆಯಲ್ಲ. ಕ್ರಿಯೆಯಲ್ಲಿ ಜ್ಞಾನದಲ್ಲಿ ಅ ಆರಾಧನೆಯಲ್ಲಿ ಸೇವೆಯಲ್ಲಿ ಕಾಯಕಾದಿಗಳಲ್ಲಿ ಶ್ರದ್ಧೆ ನಿಷ್ಠೆಗಳಿಂದ ನಿರತನಾಗಿರುವುದ ಎಕೆ! ಇದುವೇ ಭಕ್ತಿ ಪರತೆ! ಇವು ಉಳ್ಳವರೆಲ್ಲರೂ ಭಕ್ತರು. ಇವರಿಗೆಲ್ಲ ಹೆಚ್ಚಿನ ವುಂಟಾಗುತ್ತದೆ; ಮಹಾತ್ಮ್ಯವುಂಟಾಗುತ್ತದೆ."

(ಮುಂದುವರೆಯುತ್ತದ

ಸಿದ್ಧಗಂಗಾ

# ನಂಬು ಶರಣತ್ವ ನೆಚ್ಚು ಬಸವತ್ವ

ಸೊ.ದಾ. ವಿರುಪಾಕ್ಷಗೌಡ, ಹೊಸಪೇಟೆ-583201.

ಜನಿವಾರ ಶಿವದಾರ ಲಿಂಗಾಧಾರತ್ವದ ವಿಧಿ ನಿಧಿಗಳು
ಭವಿ ಧರ್ಮಕ್ಕೆ ಒಂದೊಂದು ವೋಡಿಯ ಸಾವಿರೆಂಟು ರೂಢಿಗಳು
ಜಡತ್ವ ಜರತಾರತ್ವ ಸೊಂಡಿಲುದ್ದಗಲದ ಅಚರ್ಕ ಸ್ವಾಹದವು
ವೇದ ಪುರಾಣ ದೇವಾನುದೇವತೆಗಳ ದಂಡಿನ ದಕ್ಷಿಣ ಬೇಡಿಕೆಯವು

ವಿಷ್ಣುದಾರಿ ಬ್ರಹ್ಮದಾರಿ ಶಿವದಾರಿ ಲಿಂಗಾಂಗ ಸಂಘದಾರಿಯ
ಸರ್ವ ಧರ್ಮ ಜೀವದಾರಿಗಳು ಅದೆನಿತೆನಿತೋ ಅಂತ...ಅನಂತ........
ವಿಘ್ನ ಕಂಟಕ ಸಂಕಟಗಳಿಗೆ ಒಂದೊಂದು ಕಾಡೊ ಶಕ್ತಿ
ಮಾಟ ಮಾಡಿಸೋಕೆ ಕಾಡಿಸೋಕೆ ಪರಿಹರಿಸೋಕೆ ನಾನಾ ವ್ರತಪೂಜೆಗಳು

ಆಚಾರ್ಯರೆಲ್ಲರ ದ್ವೈತ ಅದ್ವೈತ ವಿಶಿಷ್ಟಾದ್ವೈತ್ವದ ಹಲವು ಧರ್ಮ ಬಗೆ
ಸಾಧು ಸನ್ಯಾಸಿ ಸಂಸಾರಿ ಸಾತ್ವಿಕರಿಗೆ ಅಂಟಿದ ಬಹು ಬಟ್ಟೆಯ ಧರ್ಮತತ್ತ್ವಗಳು
ಶೋಧಿಸಿ ಸ್ವಾಹಿಸಿ ಸವಿಗೊಳ್ಳುವಲ್ಲಿ ಜನಮರುಳೋ ಜಾತ್ರೆ ಮರುಳೋ
ಮುಕ್ತಿ ಸೂಕ್ತಿ ಯುಕ್ತಿಯ ಜೀವನ ಸೌಖ್ಯಗೆ ಎಲ್ಲವೂ ಕೇಶ ಗಂಟಿನ ನಂಟೇ

ಅಂತೆಯೇ ನಂಬಲು ಶರಣತ್ವ ನೆಚ್ಚಲು ಬಸವತ್ವ ಅರಿಯಲು ಇಷ್ಟಲಿಂಗತ್ವ
ವರ್ಣರಹಿತ ಸರ್ವ ಸಮಾನಾನುಭವದ ಅರಿವು ಸೋಪಾನದ ಧರ್ಮಒಂದಿದೆ
ಧರ್ಮ ಪ್ರಜೆಯಿಂದ ಧರ್ಮಪ್ರಜೆಗಾಗಿ ಧರ್ಮಪ್ರಜೆಗೋಸ್ಕರವೆ ಪ್ರಜಾಧರ್ಮ
ಅದುವೇ ವರ್ಣ ವರ್ಗ ಕರ್ಮ ಸಿದ್ಧಾಂತ ರಹಿತದ ಬಸವ ಶರಣಧರ್ಮ

# ವಿದ್ಯಾರ್ಥಿ ಜೀವನದ ಬೆಳಕು ಸರಣಿ—೧೬

ಬಿ.ಎಸ್. ಕೃಷ್ಣಮೂರ್ತಿ, ನಂ. 5, ಸೀತಾ ವಿಲಾಸ ರಸ್ತೆ, ಮೈಸೂರು - 570 024.

**ಕಲಿಕೆಯಲ್ಲಿ ಅಭಿರುಚಿ :** ವಿದ್ಯಾರ್ಥಿಗಳಿಗೆ ಯಾವ ಬಗೆಯ ವಿದ್ಯೆಯಲ್ಲಿ ಅಭಿರುಚಿ ಮತ್ತು ಇಚ್ಛೆ ಇದೆಯೋ ಅದೇ ಬಗೆಯ ವಿದ್ಯೆಗೆ ಹಿರಿಯರು ಅವಕಾಶ ಕೊಡಬೇಕು. ಹುಡುಗರು ಆಸಕ್ತಿ ಇರುವ ವಿದ್ಯೆಯನ್ನೇ ಕಲಿತರೆ ಉತ್ತಮ ಫಲ ನೀಡುತ್ತದೆ. ಏಕೆಂದರೆ ವಿದ್ಯಾರ್ಥಿಗೆ ತಾನು ಬಯಸಿದ್ದ ವಿದ್ಯೆ ದೊರೆತರೆ ಬೇಗ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೇಲ್ತರಹದ ಉದ್ಯೋಗ ದೊರೆತು ಹೆಚ್ಚು ಸಂಪಾದನೆ ಬರುವುದೆಂಬ ನಂಬಿಕೆ ವ್ಯಾಪಿಸಿರುತ್ತದೆ. ತನಗೆ ಬೇಡವಾದ ವಿದ್ಯೆ ಗಳಿಸಲು ಪ್ರೇರಿಸಿವರೆ ಆದರಿಂದ ವಿದಾರ್ಥಿಯು ಓದು ಮಾಘಮಾಸದ ಒಲ್ಲದ ಸ್ನಾನವಾಗುವುದು. ಆಗ ಆ ವಿದ್ಯೆ ಆಂಗ್ಲೇಯ ಭಾಷೆಯಲ್ಲಿ ಹೇಳಿರುವಂತೆ " you can take the hourse to water, But we can-not make him drink ಎಂಬಂತಾಗುತ್ತದೆ. ಅಂದರೆ ನೀರು ಕುಡಿಯಲು ಇಷ್ಟಪಡದ ಕುದುರೆಯ ಬಾಯಿಯನ್ನು ಎಳೆದು ನೀರು ಕುಡಿಯೆಂದು ತೊಟ್ಟಿಯಲ್ಲಿ ಮುಳುಗಿಸಿದರೆ ಅದು ನೀರನ್ನು ಕುಡಿಯಲು ಇಷ್ಟಪಡುವುದೇ ? ಅದರಂತೆ ವಿದ್ಯಾರ್ಥಿಯಗತಿಯೂ ಆಗುತ್ತದೆ. ಒಬ್ಬೊಬ್ಬರಿಗೆ ಒಂದೊಂದು ಕಾಯಕದಲ್ಲಿ ಅಭಿರುಚಿ ಇರುವುದು ಸ್ವಾಭಾವಿಕವೇ ತಾನೇ ? ಆದ್ದರಿಂದ ಹುಡುಗರ ಅಭಿರುಚಿಗೆ ತಣ್ಣೀರು ಎರಚದೇ ಅವರವರ ಇಚ್ಛೆಗೆ ಉತ್ತೇಜನ ಕೊಡಬೇಕಾದ್ದು ನ್ಯಾಯವೂ, ಧರ್ಮವೂ ಆಗಿದೆ. ಹೀಗಾದರೆ ಕುಣಿಯುವವರ ಆಸೆಗೆ ಗೆಜ್ಜೆ ಕಟ್ಟಿದರೆ ಕುಣಿಯುತ್ತಿರುವವರ ಮನ ಸಂತಸಗೊಂಡು ಇನ್ನೂ ಉತ್ತಮ ಹೆಜ್ಜೆ ಹಾಕಿ ಕುಣಿಯುವನು ಆದ್ದರಿಂದ ತಮ್ಮ ಹಿತ ದೃಷ್ಟಿಯ ಗುರಿಯನ್ನು ನಿರ್ಧರಿಸಿ ಅದಕ್ಕನುಗುಣವಾದ ವಿದ್ಯಾಭ್ಯಾಸ ಮಾಡಲು ಆಸ್ತಿಭಾರ ಹಾಕಿಕೊಂಡು ಮುನ್ನಡೆಯಬೇಕು.

ಕಲಿಕೆಗೆ ವಯಸ್ಸು ಮುಖ್ಯ ಕಾರಣವಲ್ಲ. ಕಲಿಯಲುಹುಮ್ಮಸ್ಸು ಮತ್ತು ಅಭಿರುಚಿ ಕೂಡಿದ್ದು ಸಾಧಿಸುವ ಛಲ ಮತ್ತು ನಿರ್ಧಾರ ಅತ್ಯವಶ್ಯಕ. ಒಂದೂರಿನಲ್ಲಿ ಒಬ್ಬ ವಿದ್ಯಾರ್ಥಿ ಪ್ರೌಢಶಾಲೆಯಲ್ಲಿ ಎಸ್ಸೆಸ್ಸೆಲ್ಸಿ ಪರೀಕ್ಷೆಗೆ ಕುಳಿತಿದ್ದ, ಕಷ್ಟಪಟ್ಟು ಓದಿದ್ದನೋ ಇಲ್ಲವೋ ತಿಳಿಯದು. ಪರೀಕ್ಷೆಯ ಫಲಿತಾಂಶ ಬಂದಾಗ ಪಟ್ಟಿಯಲ್ಲಿ ಹುಡುಗ ನಪಾಸಾಗಿದ್ದ. ಮೊದಲನೆ ಸಲ ಸೋತಿದ್ದರಿಂದ ಈಗಿನ ಕೆಲವು ವಿದ್ಯಾರ್ಥಿಗಳಂತೆ ತಾಯ್ತಂದೆಗಳು ದಂಡಿಸುವ ಭಯದಿಂದ ಆತ್ಮಹತ್ಯವನ್ನು ಮಾಡಿಕೊಳ್ಳುವುದಾಗಲಿ, ಮನೆ ಬಿಟ್ಟು ಓಡಿ ಹೋಗುವುದಾಗಲಿ ಮಾಡಲಿಲ್ಲ ಪ್ರತಿ ವರ್ಷವೂ ತಪ್ಪದೆ ಪರೀಕ್ಷೆಗೆ ಹಾಜರಾಗುತ್ತಿದ್ದ. ಹೀಗೆ ಮೂರು ಸಾರಿ ಅಂದರೆ ಮೂರು ವರುಷಗಳು ಓದಿದ ತರಗತಿಯಲ್ಲೇ ಓದಿ ನಾಲ್ಕನೇ ವರ್ಷದಪರೀಕ್ಷೆಯಲ್ಲಿ ತೇರ್ಗಡೆಯಾದ. ಅವನ ಜೊತೆ ವಿದ್ಯಾರ್ಥಿಗಳಿಂದ ಆದ ಪರಿಹಾಸ್ಯಕ್ಕೆ ನಾಚದೆ, ಭಯಪಡದೆ ವಿದ್ಯೆಯನ್ನು ಸಾಧಿಸಿದ. ಯಾರೇ ಆದರೂ ವಿದ್ಯೆಯಲ್ಲೂ ಆಹಾರದಲ್ಲೂ ವ್ಯವಹಾರದಲ್ಲೂ ಸಂಗೀತದಲ್ಲೂ ಲಜ್ಜೆಯನ್ನು ವರ್ಜಿಸಿ ನಡೆದರೆ ಆಗ ಯಶಸ್ಸು ಖಂಡಿತ ಬಂದೇ ಬರುತ್ತದೆ. ಈ ನಂಬಿಕೆ ಸ್ಥಿರವಾಗಿರಲಿ.

# ಪ್ರಾಣ ಉಳಿಸುವ ಪ್ಯಾರಾಷೂಟ್

ಪ. ರಾಮಕೃಷ್ಣ ಶಾಸ್ತ್ರಿ ಶಿವಶಕ್ತಿನಿಲಯ, ಮಜ್ಜಿನ, ದಕ್ಷಿಣ ಕನ್ನಡ ಜಿಲ್ಲೆ.

ಆಕಾಶದಲ್ಲಿ ಹಾರುತ್ತಿರುವ ವಿಮಾನವೊಂದರಲ್ಲಿ ಯಾಂತ್ರಿಕ ದೋಷ ಕಾಣಿಸಿ ಕೊಳ್ಳುತ್ತದೆ. ಇನ್ನೇನು ಇಂಧನದ ಟಾಂಕಿಗೆ ಕಿಡಿ ಹತ್ತಿಕೊಂಡು ಅದು ಸ್ಫೋಟ ವಾಗಲಿದೆ ಎಂದು ಚಾಲಕ ವರ್ಗದವರಿಗೆ ಅರಿವಾಗುತ್ತದೆ. ಆಗ ಅವರು ಜೀವಸಹಿತ ಪಾರಾಗಲು ಇರುವ ಉಪಾಯವೆಂದರೆ ಕೊಡೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ವಿಮಾನದ ಕಿಟಕಿಯಿಂದ ಕೆಳಗೆ ಧುಮುಕುವುದು. ಕೈಯಲ್ಲಿ ಹಿಡಿದ ಕೊಡೆ ಅವರನ್ನು ಒಮ್ಮೆಲೇ ನೆಲಕ್ಕೆ ಬೀಳಗೊಡದೆ ಬಲು ನಿಧಾನವಾಗಿ ಇಳಿಸುತ್ತದೆ.

ಈ ಪ್ರಾಣರಕ್ಷಕ ಕೊಡೆಯ ಹೆಸರು ಪ್ಯಾರಾಷೂ(ಚೂ)ಟ್ ಎಂದು ಫ್ರೆಂಚ್ ಭಾಷೆಯಲ್ಲಿ ಪರೇರ್ ಎಂದರೆ ನಿವಾರಿಸು, ಷಟ್ ಎಂದರೆ ಧುಮುಕು ಎಂದರ್ಥ. ತೊಂದರೆಯನ್ನು ನಿವಾರಿಸಲು ಕೆಳಗೆ ಧುಮುಕಲು ಬಳಸುವ ಈ ಸಾಧನಕ್ಕೆ ಅಂಥ ವಿಶಿಷ್ಟ ಅರ್ಥದ ಹೆಸರಿದೆ.

ನೂರಾರು ವರ್ಷಗಳ ಹಿಂದೆಯೇ ಲಿಯೊನಾರ್ಡ್ ಡವಿನ್ಸಿ ಇಂಥ ಹಾರುವ ಶಕ್ತಿ ಹೊಂದಿದ ಯಾಂತ್ರಿಕ ಕೊಡೆಯ ಬಗೆಗೆ ಕಲ್ಪಿಸಿ ಅದರ ಚಿತ್ರವನ್ನು ಬರೆದಿಟ್ಟಿದ್ದ. ಚಚ್ಚೌಕಾಕೃತಿಯ ಬಟ್ಟೆಯೊಂದರ ಮೇಲ್ಭಾಗ ಶಂಕು ಆಕೃತಿಯಲ್ಲಿದ್ದು, ಅದರ ನಾಲ್ಕು ಬದಿಗಳನ್ನು ಬಿಗಿಯಾಗಿ ಹಗ್ಗದಿಂದ ಕಟ್ಟಿ, ಇದನ್ನು ಹಿಡಿದುಕೊಂಡರೆ ಆಕಾಶದಲ್ಲಿ ಹಾರಾಡಬಹುದೆಂಬ ಅವನ ಕಲ್ಪನೆಯನ್ನು ಅನೇಕರು ಅಲ್ಲಗಳೆದು ಪರಿಹಾಸ್ಯ ಮಾಡಿದರೇ ವಿನಾ ಕೃತಿರೂಪಕ್ಕಿಳಿಸಲಿಲ್ಲ.

ಈ ಕಲ್ಪನೆಯನ್ನು ಕೃತಿರೂಪಕ್ಕಿಳಿಸಿದ ಮೊದಲಿಗ ಲೂಯಿಸ್ ಲಿಯೊನಾರ್ಮಂಡ್. 1783ರಲ್ಲಿ ಅವನು ಎರಡೂ ಕೈಗಳಲ್ಲೂ ಒಂದೇ ಆಕಾರದ ಕೊಡೆಗಳೆರಡನ್ನು ಹಿಡಿದು ಕೊಂಡು ಒಂದು ಕಟ್ಟಡದ ಮಹಡಿಯಿಂದ ಕೆಳಗೆ ಧುಮುಕಿದ. ಆತ ಕಾಲು ಮುರಿದು ಕೊಳ್ಳುತ್ತಾನೆಂದು ಭಾವಿಸಿದ್ದವರೆಲ್ಲ ವಿಸ್ಮಯಗೊಳ್ಳುವಂತೆ ನಿಧಾನವಾಗಿ ನೆಲವನ್ನು ತಲುಪಿದ.

ಮೊದಲನೆಯ ಆಕಾಶಬುಟ್ಟಿ ಯಾತ್ರಿ ಜೀನ್ ಫ್ರಾನ್ಸ್‌ಕಾಯಿಸ್ ಇಂತಹದೇ ಕೊಡೆಯೊಂದನ್ನು ನಿರ್ಮಿಸಿ, ಅದಕ್ಕೆ ಬುಟ್ಟಿಯನ್ನು ಕಟ್ಟಿದ. ಬುಟ್ಟಿಯಲ್ಲಿ ಒಂದು ನಾಯಿಮರಿಯನ್ನು ಕೂರಿಸಿ ಆಕಾಶದಲ್ಲಿ ಹಾರಿಸಿದ. 1793ರಲ್ಲಿ ಆತ ಇಂತಹದೇ ಆಕಾಶ ಬುಟ್ಟಿಯಲ್ಲಿ ಕುಳಿತು ಪಯಣಿಸಲು ಅವನಿಗೆ ಕೊಡೆಯೇ ನೆರವಾಯಿತು.

ಹೀಗಿದ್ದರೂ ಪ್ಯಾರಾಚೂಟ್‌ನ ಕಲ್ಪನೆಯನ್ನು ನಿಜವಾಗಿ ಸಾಕಾರಗೊಳಿಸಿದ ಕೀರ್ತಿ ಫ್ರಾನ್ಸಿನ ಆಂಡ್ರೆ ಗಾರ್ನರಿನನಿಗೆ ಸೇರಬೇಕು. ಬುಡಾಪೆಸ್ಟಿನ ಸೆರೆಮನೆಯೊಳಗೆ ಶಿಕ್ಷೆ ಅನುಭವಿಸುತ್ತಿದ್ದ. ಅವನಿಗೆ ಬಿಡುಗಡೆಯ ಬಯಕೆ ತೀವ್ರವಾಗಿತ್ತು. ಆಗ ಖೈದಿಗಳಿಗೆ ಸೆರೆಮನೆಯ ಮಾಳಿಗೆಯಲ್ಲಿ ಮಲಗುವ ಸ್ವಾತಂತ್ರ್ಯವಿತ್ತು. 1797ರ

ಒಂದು ದಿನ ರಾತ್ರಿ ತಾನು ಹೊದೆಯುವ ದಪ್ಪ ಚಾದರದ ನಾಲ್ಕು ಮೂಲೆಗಳನ್ನು ಸೇರಿಸಿ ಗಂಟು ಕಟ್ಟಿದ ಇದನ್ನು ಹಿಡಿದು ಕೆಳಗೆ ಧುಮುಕಿದ. ಚಾದರಿನೊಳಗೆ ಗಾಳಿ ತುಂಬಿ ಅದನ್ನು ಬಲೂನಿನಹಾಗೆ ಉಬ್ಬಿಸಿದುದರಿಂದ ನಿಧಾನ ಗತಿಯಿಂದ ಆಂಡ್ರೆ ನೆಲವನ್ನು ತಲುಪಿದ. ತರುವಾಯ ಅಲ್ಲಿಂದ ಓಡಿಹೋಗಿ ಜರ್ಮನಿಯಲ್ಲಿ ಆಕಾಶದಿಂದ ಕೆಳಗಿಳಿಯುವ ವಿಚಿತ್ರ ಪ್ರದರ್ಶನವಿತ್ತು ಹಣಗಳಿಸಲಾರಂಭಿಸಿದ, ಈ ಶೋಧನೆಯನ್ನು ಇನ್ನಷ್ಟು ಪರಿಷ್ಕೃತಗೊಳಿಸಿದವನೂ ಅವನೇ.

ಏಳು ಮೀಟರ್ ಸುತ್ತಳತೆಯ (ದಪ್ಪ ಬಟ್ಟೆಯಿಂದ) ಕೊಡೆಯನ್ನು ತಯಾರಿಸಿ ಆಂಡ್ರೆ ಆಕಾಶ ಬುಟ್ಟಿಗೆ ಕಟ್ಟಿ ಹಾರಿಬಿಡಲಾರಂಭಿಸಿದ. ಒಮ್ಮೆ ಇದರಲ್ಲಿ ತಾನೂ ಜೊತೆಯಾಡುತ್ತಾ ಸ್ವಲ್ಪ ದೂರಕ್ಕೆ ಹಾರಿದ. ರೈಟ್ ಸಹೋದರರು ವಿಮಾನಗಳನ್ನು ಶೋಧಿಸಿದ ಮೇಲೆ ವಿಮಾನ ಚಾಲಕರು ಅದರಿಂದ ಕೆಳಗೆ ಹಾರಲು ಆಂಡ್ರೆಯ ಕೊಡೆಗಳ ನೆರವು ಪಡೆಯಲು ಮುಂದಾದರು. ಆದರೆ ಈ ಕೊಡೆಗಳ ಆಕಾರ ಅವರ ಪ್ರಯತ್ನಕ್ಕೆ ಅಡ್ಡಿಯಾದವು.

ವೈಮಾನಿಕರು ಬೆನ್ನಿಗೆ ಕಟ್ಟಿಕೊಳ್ಳುವಂತಹ ಮಡಚಿರುವ ಪ್ಯಾರಾಷೂಟ್‌ಗಳನ್ನು ಗ್ಲೆಬ್ ಕೊಟೆಲ್ ನಿಕೊನ್ ಎಂಬ ರಶಿಯನ್ ವಿಜ್ಞಾನಿ ತಯಾರಿಸಿದ. ವೈಮಾನಿಕರು ವಿಮಾನದಿಂದ ಧುಮುಕಿದ ಕೆಲವು ಸೆಕೆಂಡಿನೊಳಗೆ ಈ ಕೊಡೆಗಳು ತೆರೆದು ಕೊಳ್ಳುತ್ತಿದ್ದವು. ಆಮೇಲೆ ಪ್ಯಾರಾಷೂಟ್‌ಗಳನ್ನು ಶಂಖಾಕೃತಿಯಲ್ಲಿ ತಯಾರಿಸಿ ಅದರ ಮೇಲ್ಭಾಗದಲ್ಲಿ ರಂಧ್ರಗಳನ್ನಿರಿಸಿದರೆ ಇವು ತೆರೆದ ಕೂಡಲೇ ತಮ್ಮನ್ನು ಧರಿಸಿದವರನ್ನು ಗಡಿಯಾರದ ಲೋಲಕದಂತೆ ವಾಲಾಡಿಸುತ್ತ ಕೆಳಗಿಳಿಸಬಲ್ಲವೆಂದು ಶೋಧಿಸಿ ಅದನ್ನು ಕಾರ್ಯಗತಗೊಳಿಸಲಾಯಿತು.

ಈ ಕೊಡೆಯಲ್ಲಿ ಇನ್ನಷ್ಟು ಸುಧಾರಣೆ ಮಾಡಿದವರು ಜರ್ಮನ್ನರು. 1938ರಲ್ಲಿ ಅವರು ರಿಬ್ಬನ್ ಪ್ಯಾರಾಷೂಟ್‌ಗಳನ್ನು ತಯಾರಿಸಿದರು. ಇದರಲ್ಲಿ ಗಾಳಿ ಬರಲು ಧಾರಾಳ ಅವಕಾಶವಿತ್ತುದರಿಂದ ಇವು ವಾಲಾಡದೆ ಸ್ಥಿರವಾಗಿ ಒಂದೆಡೆಗೆ ಕೆಳಗಿಳಿಸುತ್ತಿದ್ದವು

ಕೇವಲ ವೈಮಾನಿಕರ ಪ್ರಾಣರಕ್ಷಣೆಯ ಸಾಧನವಾಗಿ ಪ್ಯಾರಾಷೂಟ್‌ಗಳನ್ನು ಬಳಸದೆ ಬಹುಮುಖ ಕಾರ್ಯಗಳಿಗೆ ಅದರ ಉಪಯೋಗ ಮಾಡಲಾಗುತ್ತಿದೆ. ಪ್ರವಾಹಪೀಡಿತ ಪ್ರದೇಶಗಳಲ್ಲಿ ಪರಿಹಾರ ಸಾಮಗ್ರಿಗಳನ್ನಿಳಿಸುವುದು, ಇನ್ನಿತರ ಸಾಮಗ್ರಿಗಳನ್ನು ನಿಶ್ಚಿತವಾದ ಕಡೆಗಳಲ್ಲಿ ವಿತರಿಸುವುದು ಈ ಮೂಲಕವೇ. ಇಳಿಯುತ್ತಿರುವಾಗ ವಿಮಾನದ ಗತಿಯನ್ನು ತಗ್ಗಿಸಬೇಕಾದರೆ ಯುದ್ಧಕಾಲದಲ್ಲಿ ಪ್ರಯೋಗಿಸುವ ಬಾಂಬುಗಳ ವೇಗವನ್ನು ಕಡಿಮೆಗೊಳಿಸಬೇಕಾದರೆ ಇದನ್ನೇ ಬಳಸುತ್ತಾರೆ. ಇದೀಗ ಕ್ರೀಡಾರಂಗದಲ್ಲೂ ಈ ಮಾಂತ್ರಿಕಕೊಡೆ ಪಾದಾರ್ಪಣೆ ಮಾಡಿದೆ. ಕ್ರೀಡೆಗಾಗಿ ತಯಾರಿಸುವ ಪ್ಯಾರಾಷೂಟ್‌ನ ಆಕೃತಿ ರೆಕ್ಕೆಯಂತಿದ್ದು ಅದರಲ್ಲಿ ಎರಡು ಪದರಗಳಿರುವವು. ಕೆಳಗಿನ ಪದರದಲ್ಲಿ ತೂತುಗಳಿದ್ದರೆ ಮೇಲಿರುವ ಪದರದಲ್ಲಿ ಗಾಳಿ ಹೋಗದೆ ಹಾಗೆ ಬಿಗಿಯಾದ ಬಂದೋಬಸ್ತಿರುವುದು.

ಪ್ಯಾರಾಷೂಟ್‌ಗೆ ವಿಶಿಷ್ಟವಾದ ನಿಯಂತ್ರಕಗಳನ್ನು ಜೋಡಿಸಿದರೆ ಆಕಾಶದಲ್ಲಿ ತಾಸಿಗೆ 36 ಕಿ.ಮೀ. ವೇಗ ಪಡೆದು ಸಮಾನಾಂತರದಲ್ಲಿ ಹಾರುವುದು, ಗಾಳಿಯ ವಿರುದ್ಧ ದಿಕ್ಕಿಗೆ ಚಲಿಸುವುದು, 7 ಮೀಟರ್ ವಿಸ್ತಾರ ವೃತ್ತಾಕಾರ ಪಥದಲ್ಲಿ ಬೇಕಾದ ಕಡೆ ಇಳಿಯುವುದೂ ಸಾಧ್ಯವಾಗಿದೆ ಹೀಗೆ ವಿಶಿಷ್ಟತೆ ಪಡೆದಿರುವ ಪ್ಯಾರಾಷೂಟ್‌ಗಳಿಗೆ ಉಪಯೋಗಿಸುವ ಬಟ್ಟೆ ಪ್ಲಾಸ್ಟಿಕ್, ರೇಯಾನ್, ನೈಲಾನ್, ಹತ್ತಿ, ರೇಷ್ಮೆ, ಇತ್ಯಾದಿಗಳಿಂದ ತಯಾರಾಗುವುದು. ಹಿಂದೆ ಇವರ ಬಟ್ಟೆಗಳನ್ನು ನಮ್ಮ ದೇಶಕ್ಕೆ ವಿದೇಶದಿಂದ ತರಿಸುತ್ತಿದ್ದರು. ಆದರೆ ಈಗ ಇದನ್ನು ಮುಂಬೈ ಮತ್ತು ಕಲ್ಕತ್ತಗಳಲ್ಲಿ ತಯಾರಿಸಿ, ವಿಮಾನದಿಂದ ವಸ್ತುಗಳನ್ನಿಳಿಸುವ ಕೊಡೆಗಗಳನ್ನು ತಯಾರಿಸಲಾಗುತ್ತಿದೆ. ಸೈನಿಕರಿಗೆ ಬೇಕಾದ ಕೊಡೆಗಳಿಗೆ ವಿದೇಶಗಳಿಂದ ಆಮದಾದ ಬಟ್ಟೆಯನ್ನೇ ಬಳಸುತ್ತಾರೆ. ಸೇನಾದಳ ವಾಯುದಳಗಳಲ್ಲಿ ಶ್ರಮಿಸುವವರಿಗೆ ಇದು ಅತ್ಯಗತ್ಯ.

## ಏನೆಂತೀರಿ !   ಅಲ್ಪನಿಗೆ ಅಧಿಕಾರ ನೀಡಿದರೆ

ರಸಿಕ ಪ್ರತ್ತಿಕೆ, 2ನೇ ಕ್ರಾಸ್, ಬಡಾವಣೆ ಚನ್ನಪಟ್ಟಣ.

ತನ್ನ ಮಾಲೀಕನ ಮೊಸರನ್ನದ ಬುತ್ತಿ ತಿಂದಕೋತಿ, ಕಟ್ಟಿಹಾಕಿದ್ದ ಮೇಕೆಯ ಮೂತಿಗೆ ಕೈಒರೆಸಿ ಮರಹತ್ತಿ ಕುಳಿತಿತು. ಬಾಯಿಗೆ ತಗುಲಿದ ಮೊಸರನ್ನು ನಾಲಿಗೆ ಯಿಂದ ಮೇಕೆ ನೆಕ್ಕುತ್ತಿತ್ತು. ಇದನ್ನು ಕಂಡ ಮಾಲೀಕ ಮೊಸರನ್ನ ತಿಂದೆಯಾ! ಎಂದು ಮೇಕೆಗೆ ದೊಣ್ಣೆ ಪೂಜೆ ಮಾಡಿದ. ಈ ಕಥೆ ಬಹಳ ಹಳೆಯದು. ಆದರೆ ಇದರ ಹಿನ್ನೆಲೆಯ ಸೂತ್ರ ಸತ್ಯ. ಈಗಲೂ ಆಗಲೂ ಯಾವಾಗಲೂ ಕಾಣಿಸುತ್ತಲೇ ಇರುತ್ತದೆ. ಕೈಕೆಳಗಿನವರು ತಿಂದು ಮಾಲೀಕನ ಮುಸುಡಿಗೆ ಮುಸಿ ಒರೆಸುವ ಹವ್ಯಾಸ ಹಳೆಯದ್ದು ಇಂಥವು ಬಹಳ ನಡೆದಿವೆ. ಇತ್ತೀಚಿನ ಚುನಾವಣೆಯ ಸಂದರ್ಭದಲ್ಲಿ ಒಬ್ಬ ಸಾಮಾನ್ಯ ದ್ವಿ. ದ ಗು. ತನ್ನ ಸಾಹೇಬರ ಕೃಪಾಕಟಾಕ್ಷಕ್ಕೆ ಒಳಗಾಗಿ ಚೆನ್ನಾಗಿ ಹುಲ್ಲು ಬೆಳೆದ ಹೊಲದ್ದ ಅಧಿಕಾರ ಪಡೆದ. ಕೆತ್ತಿದ, ಬಾಚಿದ, ಮನೆ ಮುಂದಿಗೆ ಬೋರ್ನವೀಟಾ ಹಾರ್ಲಿಕ್ಸ್ ಕುಡಿಸಿದ ಮಿಕ್ಸಿ ನೈಲೆಕ್ಸ್‌ಗಳ ದೊಡ್ಡ ದೊಡ್ಡ ತಿಂಡಿ ಪೊಟ್ಟಣಗಳು ಬಂದವು ಮನೆ ಮುಂದೆ ಮಾರುತಿ ಕಾರು ಜೀಪು ಓ ಹೊ ಹೋ ಇವನೇ ಶೇರ್ಷ ಎಂಬಂತೆ ಧಿಮಾಕಿಸಿದ ಅಂಧಾದರ್ಬಾರ್ ಮಾಡಿದ ಏನಾದರೂ ಕೇಳಿದರೆ ನಿಮಗೆ ಗೊತ್ತಿಲ್ಲ ಸುಮ್ನಿರಿ ಎಂದು ಅಧಿಕಾರಿಯನ್ನೇ ದಬಾಯಿಸಿದ. ಎದುರಾದವರಿಗೆಲ್ಲ ಹುರಿಗಾಳು ತಿನ್ನಿಸಿ ಹರಿಹಾಯ್ದು ತಾರಾಮಾರಾ ವರ್ತಿಸಿದ ಹಿರಿಯರನ್ನು ಕಿರಿಯರನ್ನು ಒಂದೇ ತಕ್ಕಡಿಯಲ್ಲಿ ತೂಗಿದ ವಿಲ್ಸ್ ಫಿಲ್ಟರ್ ಸೇದಿದ, ರಂ ಕುಡಿದ. ಮಜಾಮಾಡಿದ ಎಕ್‌ದಿನ್‌ಕಾ ಸುಲ್ತಾನ್ ಆದ. ಪರಿಣಾಮ ಸಾವಿರಾರು ರೂಪಾಯಿಗಳು ಅಪರಾ ತಫರಾ ಸಾಹೇಬರ ತಲೆಗೆ ಬಂತು. ಬಿಳಿ ಬಟ್ಟೆಗೆ ಕೊಳೆ ಅಂಟಿತು. ತಲೆ ಕೆಡಿಸಿ ಕೊಂಡ ಸಾಹೇಬರು ರೇಗಿದರು. ಕೂಗಾಡಿದರು ಆದರೇನು ಬಂತು? ಏನು ಲಾಭ? ಆದದ್ದಾಗಿದೆ. ತಿಂದ ಒಡೆ ಹೊಟ್ಟೆ ಮೇಲೆ ಒದೆ ಬಿದ್ದರೂ ವಾಪಸ್ ಬರಲಾರದು ತೇಪೆ ಹಾಕಿ ಸರಿಪಡಿಸಿದರು.

ಹುಲ್ಲು ತಿಂದ ಹುಲುಮಾನವ ಹಲ್ಲು ಹಲ್ಲು ಬಿಡುತ್ತಾ ನಿಂತಿದ್ದಾನೆ. ಅಲ್ಲಿಗೆ ಆತನನ್ನು ನಿಯಮಿಸಿದ ಸಾಹೇಬರು ತಲೆಚಚ್ಚಿ ಕೊಳ್ಳುತ್ತಿದ್ದಾರೆ. ಇಂಥದ್ದು ಎಲ್ಲಾ ಕಡೆ ಇದೆ ಇಂಥ ಪರಿಸ್ಥಿತಿಯಲ್ಲಿ ನಾವೆಲ್ಲ ಏನು ಕಲಿಯಬೇಕು?

ಅಲ್ಪನಿಗೆ ಅಧಿಕಾರ ಕೊಟ್ಟರೆ ಅರ್ಧರಾತ್ರಿಯಲ್ಲೂ ಕೊಡೆ ಹಿಡಿದಾನು ಎಂಬ ಗಾದೆ ಮರೆಯಲಾಗದು. ಅವರವರ ಯೋಗ್ಯತಾನುಸಾರ ಕೆಲಸ ವಹಿಸಬೇಕು. ಕಣ್ಣು ಕುಕ್ಕುವ ಹಾಗಿನ ಕೆಲಸ ಮಾಡಬಾರದು. ಅಧಿಕಾರ ಬಂತೂಂತ ತಾರಾಮಾರಾ ವರ್ತಿಸಬಾರದು. ತಿಂದರೂ ಕರಗಿಸಿಕೊಳ್ಳಲು ಗೊತ್ತಿರಬೇಕು. ಈ ಪಂಚ ಸೂತ್ರಗಳನ್ನು ತಿಳಿಯದ ಪಾಪಿಗಳು ಆಡ್ಡ ಕಸುಬಿಗೆ ಕೈ ಹಾಕಬಾರದು. ಹಾಕಿದರೆ ಉಗಿಸಿಕೊಳ್ಳಬೇಕು.

# ಕ್ಷೇತ್ರವಾರ್ತೆ

ಹೆಚ್. ಬಿ. ಗಂಗಾಧರಯ್ಯ

## ಪೂಜ್ಯ ಶ್ರೀ ಶ್ರೀ ಉದ್ಧಾನ ಶಿವಯೋಗಿಗಳ 51ನೇ ಪುಣ್ಯಾರಾಧನೆ.

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಜನವರಿ 14 92ರಂದು ಮಂಗಳವಾರ ನೆರವೇರಿತು.

ಪ್ರಾತಃಕಾಲ ಬೆಂಗಳೂರು ಬೇಲಿ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು ಷಟ್‌ಸ್ಥಲ ಧ್ವಜಾರೋಹಣ ಮಾಡಿದರು. ಉದ್ಧಾನ ಶಿವಯೋಗಿಗಳ ಭಾವಚಿತ್ರವನ್ನು ಪಲ್ಲಕ್ಕಿಯಲ್ಲಿಟ್ಟು ಉತ್ಸವವನ್ನು ಮಂಗಳ ವಾದ್ಯದೊಂದಿಗೆ ಪ್ರಸಿದ್ಧ ರಾಷ್ಟ್ರೀಯ ಜಾನಪದ ಕಲಾವಿದ ಶ್ರೀ ಹೆಚ್. ಎಸ್. ನೀಲಕಂಠಯ್ಯನವರ ತಂಡದ ವೀರಭದ್ರನೃತ್ಯ ವೀರಗಾಸೆ, ಕರಡಿಮಜಲು ಏರ್ಪಡಿಸಿದ್ದು ಭಕ್ತಾದಿಗಳಿಗೆ ಅತೀವ ಹರುಷವನ್ನುಂಟುಮಾಡಿತ್ತು. ಶ್ರೀಮಠದ ಐದು ಸಾವಿರ ವಿದ್ಯಾರ್ಥಿಗಳು ಉತ್ಸವ ಹಾದುಬರುವ ಎರಡು ಪಾರ್ಶ್ವದಲ್ಲಿ ನಿಂತು ಭಕ್ತಿಭಾವದೊಂದಿಗೆ ನಮನಗಳನ್ನು ಸಲ್ಲಿಸುತ್ತಿದ್ದ ದೃಶ್ಯ ನೆರೆದ ನಾಡಿನ ಭಕ್ತರ ಅಂತರಂಗವನ್ನು ಪರಿಶುದ್ಧ ಗೊಳಿಸುವಂತೆ ಇದ್ದಿತು.

ಸಮಾರಂಭ ಶ್ರೀ ಮಠದ ಸಭಾಂಗಣದಲ್ಲಿ 10-30 ಘಂಟೆಗೆ ಪ್ರಾರಂಭ ವಾಯಿತು. ಬೇಲಿಮಠದ ಶ್ರೀ ಶ್ರೀಗಳವರು ಮಾತನಾಡಿ ನಮ್ಮದೇಶವನ್ನು ಏಕ ಸೂತ್ರರೂಪದಲ್ಲಿ ಇಟ್ಟಿರುವುದು ಮಹಾನ್ ವ್ಯಕ್ತಿಗಳ ಜೀವನ ದರ್ಶನ ಮಾತ್ರ. ಜಗತ್ತು ಇಂದು ಅಸ್ಥಿರದ ವಾತಾವರಣದಲ್ಲಿದೆ. ಪ್ರಸ್ತುತ ಮಹಾವ್ಯಕ್ತಿಗಳನ್ನು ಅವರ ಸಾಧನೆಗಳನ್ನು ಸ್ಮರಿಸಿಕೊಳ್ಳಬೇಕಾಗಿದೆ.

ಉದ್ಧಾನ ಶಿವಯೋಗಿಗಳು ಶ್ರೀ ಮಠದ ಮಣ್ಣಿನ ಕಣ ಕಣಗಳಲ್ಲಿ ಪಾವಿತ್ರತೆ ಯನ್ನು ತುಂಬಿ ಪ್ರಭಾವಬೀರಿದ್ದಾರೆ. ಅವರ ಜೀವನದರ್ಶನ ಉದಾತ್ತಚೇತನ ವಾಗಿತ್ತು. ಮರ್ತ್ಯಲೋಕದ ಮಹಾಮಣಿಹವನ್ನು ಪೂರೈಸಿದ್ದಾರೆ. ಅವರ ಅನು ಗ್ರಹದಿಂದ ಬಾಳಬೇಕಾಗಿದೆ. ಅವರನ್ನು ವಿದ್ಯುಜನಕಕ್ಕೆ ಹೋಲಿಸಬಹುದು. ಬೆಳಕಿನ ಪ್ರಕಾಶಕ್ಕೆ ಮೂಲ ಚೈತನ್ಯ ಶಕ್ತಿಯ ಕೇಂದ್ರ. ಇಂದು ಕಾಣುತ್ತಿರುವ ಸ್ವಾರ್ಥ, ದುರಭಿಮಾನ ಓಡಿಸಿ ಸ್ವಚ್ಛ ಮಾಡುವಲ್ಲಿ ಅವರ ಆದರ್ಶ ಪಾಠವನ್ನು ಚಿಂತನ- ಮಾಡಬೇಕಾಗಿದೆ ಎಂದರು.

ಕಿರಿಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಗುರುವಿನ ಮಹತ್ವದ ಬಗ್ಗೆ ಮಾತನಾಡಿ ಅಜ್ಞಾನ ಕಳೆದು ಜ್ಞಾನ ನೀಡುವ ಗುರುವಿನ ಸ್ಥಾನ ಮಹತ್ವವಾದುದು. "ಶಿವಪಥವರಿವಡೆ" ಗುರುಪಥವೇ ಮೊದಲು ಇದು ಬಸವಣ್ಣನವರ ನುಡಿ ಅವರ ಸನ್ನಿಧಿಯಲ್ಲಿರುವುದೇ ನಮ್ಮೆಲ್ಲರ ಪುಣ್ಯ.

ಪ್ರೊ॥ ಎಸ್.ಎನ್. ಶಾಂತವೀರಪ್ಪನವರು ಸಾಹಿತ್ಯ, ಧರ್ಮ ಮತ್ತು ನೀತಿ ಬಗ್ಗೆ ಉಪನ್ಯಾಸ ನೀಡುತ್ತಾ ಚಿಂತನ ಶೀಲರಿಗೆ ಸಾಧನೆ ಮಾಡಬೇಕೆಂಬ ಹಂಬಲ ವಿರುತ್ತದೆ. ಉದ್ದಾನ ಶಿವಯೋಗಿಗಳು ಉನ್ನತ ವಿದ್ಯಾರ್ಹತೆ ಹೊಂದಿದವರಲ್ಲ. ಆದಾಗ್ಯೂ ಘನತೆವೆತ್ತ ಸಂಪನ್ನರಾದ ಶ್ರೀ ಶ್ರೀಗಳವರನ್ನು ಆರಿಸಿ ಶ್ರೀ ಮಠದ ಧವಳ ಕೀರ್ತಿಯನ್ನು ರಾಷ್ಟ್ರೀಯ ಮಟ್ಟದಲ್ಲಿ ವಿಖ್ಯಾತಗೊಳಿಸಿರುವುದು ಅವರ ಅಂತರಂಗ-ಬಹಿರಂಗ ಶಕ್ತಿಯನ್ನು ನಿರೂಪಿಸುತ್ತದೆ. ಶ್ರೀ ಮಠದಲ್ಲಿ ಅದ್ಭುತ ಕಾರ್ಯಗಳು ನಡೆಯುತ್ತಿರುವುದಕ್ಕೆ ಹಿನ್ನೆಲೆ ಅವರ ಕ್ರಿಯಾಸಮಾಧಿಯಿಂದ ಹೊರಸೂಸುವ ತರಂಗಗಳ ಪ್ರಭಾವ ವೆಂದು ವಿಜ್ಞಾನಿಗಳು ವಿಮರ್ಶೆ ಮಾಡಿದ್ದಾರೆ. ಇಂದು ಭಾರತದಲ್ಲಿ ಕತ್ತಲು ಆವರಿಸಿದೆ. ಇದಕ್ಕೆ ಪರಿಹಾರ ಶ್ರೀ 'ಸಿದ್ಧಗಂಗಾ' ಮಠದಂಥ ಸಂಸ್ಥೆಗಳು ಬೆಳಕುನೀಡಬೇಕಾಗಿವೆ. ಧರ್ಮ ಮತ್ತು ನೀತಿಗೆ ಸಂಬಂಧಿಸಿದಂತೆ ಪರಿಶುದ್ಧವಾದ ಕಾವ್ಯ ಮತ್ತು ಪುಸ್ತಕಗಳನ್ನು ಮಾತ್ರ ಓದಬೇಕು ಎಂದು ಹೇಳಿದರು.

ಬಾಣಾವಾರದ ಶ್ರೀಮತಿ ಸರೋಜ ಗೋವಿಂದರಾಜು ಮಾತನಾಡಿ ಮಾನವ ಜನ್ಮ ಪವಿತ್ರವಾದುದು. ಯುಗ ಪ್ರವರ್ತಕರು ನಡೆದ ಹಾದಿ ದಾರಿದೀಪವಾಗಿದೆ. ಜೀವನ ಶಾಶ್ವತವಲ್ಲ ನೆನಪು ಉಳಿಯುವಂತೆ ಬಾಳಿ ಬದುಕಬೇಕು. 'ಬಸವ' ನಾಮವು ಭಕ್ತಿ, ಸಮಾನತೆ, ವಿನಯ ಸೂಚಿಸುತ್ತದೆ. ಈ ಮಹಾ ಚೈತನ್ಯ ಚಿಲುಮೆ ತಂಪನ್ನು ನೀಡುತ್ತದೆ.

ಶ್ರೀ ಶ್ರೀಗಳವರು ಆಶೀರ್ವಚನ ನೀಡಿ ವ್ಯಕ್ತಿಯ ಜೀವನ ಬಾಳ್ವಿಕೆಯನ್ನು ನಿವೇದಿಸುತ್ತದೆ,ಇಂದು ಜೀವನ ದಾನವ ಜೀವನವಾಗಿ ಮೃಗ ಜೀವನವಾಗಿದೆ. ಈ ಸಮಾರಂಭ ಸೂಚನೆ ಕೊಡುವುದಾಗಿದೆ. ನಮ್ಮ ಪೂಜ್ಯ ಶ್ರೀ ಶ್ರೀ ಉದ್ದಾನ ಗುರುಗಳು ಕಲಿತವರಲ್ಲ ಆದರೆ ಅನುಭವ ಎತ್ತರವಾದುದು, ಹೆಚ್ಚು ತಿಳಿದು ಆಚರಿಸ ಬೇಕೆನ್ನುವುದುಅವರ ಆಕಾಂಕ್ಷೆಯಾಗಿತ್ತು, ನಿರಂತರ ಸಾಧನೆಮಾಡಿ ಮೇಲೆ ಬಂದರು. ಇಂದು ಜಗತ್ತು ಅಪಾಯದ ಅಂಚಿನಲ್ಲಿದೆ. ಇದಕ್ಕೆ ತಾಯಿತನ ಮತ್ತು ಶಿಕ್ಷಕರ ಕ್ರಿಯಾಶೀಲತೆ ಶ್ರೀ ರಕ್ಷೆಯಾಗಬೇಕೆಂದರು.

## ಗ್ರಾಮಾಂತರ ಬಸವ ಜಯಂತಿ ಸಮಾರೋಪ ಸಮಾರಂಭ

ವಿಶ್ವಬಂಧುವಾದ ಭಗವಾನ್ ಬಸವಣ್ಣನವರ ಅಮೂಲ್ಯ ಸಂದೇಶವನ್ನು ನಾಡಿನ ಬಂಧು ಭಗಿನಿಯರಿಗೆ ತಿಳಿಯಪಡಿಸುವ ಮಹಾಮಣಿಹವನ್ನು 1979 ನೇ ವರ್ಷದಿಂದ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ನಡೆಸಿಕೊಂಡು ಬರುತ್ತಿದ್ದಾರೆ.

ಇವರ ಅಂಗವಾಗಿ ವಾರ್ಷಿಕ ಸಮಾರೋಪ ಸಮಾರಂಭದಲ್ಲಿ 15ರ ಪುಣ್ಯ ಸಂಕ್ರಮಣದಂದು ಪ್ರೊ॥ ಎಸ್.ಎಸ್. ಭೂಸರೆಡ್ಡಿಯವರು ಮಾತನಾಡಿ 12ನೇ ಶತಮಾನದ ಉಜ್ವಲತೆಯನ್ನು ಅರಿಯಬೇಕು, ಆತ್ಮಜ್ಞಾನಕ್ಕಾಗಿ ದೇಶ ವಿದೇಶಗಳಿಂದ ಬಸವಣ್ಣನವರ ದರುಶನಕ್ಕಾಗಿ ಬಂದರು. ಲಿಂಗ ತತ್ವದ ಆಧಾರದ ಮೇಲೆ ಸಮಾಜ ರಚಿಸಿದರು ಭಗವಂತನ ದೃಷ್ಟಿಯಲ್ಲಿ ಎಲ್ಲರೂ ಸಮಾನರೆಂದು ಪ್ರತಿ-ಪಾದಿಸಿದರು.

ಡಾ॥ ಶ್ರೀ ಎ. ಎಲ್. ಶಿವರುದ್ರಪ್ಪನವರು ಉಪನ್ಯಾಸ ನೀಡಿ ನಮ್ಮದು ಅಲ್ಪ ಜೀವನದರ್ಶನ. ಬಸವಾದಿ ಪ್ರಮಥರದು ಅಖಂಡ ಜೀವನದರ್ಶನ. ಇದು ಉದಾತ್ತವಾದಾಗ ಪ್ರಜ್ಞೆ ಮೇಲೇರುತ್ತದೆ ಅವರ ಪ್ರತಿಯೊಂದು ಸರಳ ಸುಂದರ ವಚನಗಳು ಮಾನವನ ಬದುಕನ್ನು ನಿರೂಪಿಸುತ್ತವೆ. ವಚನಗಳನ್ನು ಓದಿ ಅರ್ಥ ಅರಿತು ಆ ಮಾರ್ಗದಲ್ಲಿ ನಡೆಯಬೇಕು. ಇದಕ್ಕಾಗಿಯೇ ನಾಟಕದ ಮಾಧ್ಯಮದಲ್ಲಿ ಜನತೆಗೆ ಬಸವಣ್ಣನವರ ಜೀವನ ದರ್ಶನ ಮಾಡಿಸುತ್ತಿರುವುದು ಶ್ಲಾಘನೀಯವಾಗಿದೆ.

ಈ ಸಂದರ್ಭದಲ್ಲಿ ಶ್ರೀ ಶ್ರೀ ಗಳವರು ಆಶೀರ್ವಚನನೀಡಿ ಬಸವಣ್ಣನನ್ನು ಅರಿಯುತ್ತಾ ಹೋದರೆ ಹೊಸಬೆಳಕು ಗೋಚರವಾಗುತ್ತದೆ. ಏನನ್ನಾದರು ಗಳಿಸ ಬಹುದು, ಆದರೆ ಜೀವನದ ಅರ್ಥತಿಳಿಯುವುದು ಕಷ್ಟ. ಇದಕ್ಕೆ ಸಾಧನೆ ಮುಖ್ಯ, ಕಾಯಕ ಶ್ರೇಷ್ಠವಾದುದು, ಈ ತತ್ವದ ಮರೆವು ದೇಶ ಸರ್ವನಾಶವಾಗುತ್ತಿದೆ. ಕುಳಿತು ಊಟ ಮಾಡದೆ ದುಡಿದು ಊಟ ಮಾಡಬೇಕು. ಬಸವಣ್ಣ ಧೂಳಿಗೆ ಬಿದ್ದವರನ್ನು ಮೇಲಕ್ಕೆ ಏರಿಸಿ ಸಂಸ್ಕಾರ ನೀಡಿ ಮಹಾನುಭಾವರನ್ನಾಗಿ ಮಾಡಿದ. ಅವರು ತೋರಿದ ಮಾರ್ಗ ಎಲ್ಲಾ ಕಾಲಕ್ಕೆ ಸ್ತುತ್ಯವಾಗಿವೆ.

ಎರಡನೆ ಅಧಿವೇಶನದಲ್ಲಿ ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಅವರು ಮಾತನಾಡಿ ಬಸವಣ್ಣನವರು ಸಂಸಾರಿಗಳಾಗಿದ್ದರು, ಮಂತ್ರಿಗಳಾಗಿದ್ದರು ಧಾರ್ಮಿಕ ಮುಖಂಡರಾಗಿದ್ದರು ಚೈತನ್ಯ ಶೀಲವನ್ನು ಕೊಟ್ಟುಹೋಗಿದ್ದಾರೆ. ಅವರು ಈ ಜಗತ್ತಿನಲ್ಲಿ ಇದ್ದುದು ಕೇವಲ 36 ವರ್ಷ. ಇವರಲ್ಲಿ ಅಗ್ನಿಪರ್ವತದ ಪ್ರಚಂಡ ಶಕ್ತಿ

ಇತ್ತು. ಇದಕ್ಕೆ ಕಾರಣ ಅವರ ತಾಯಿಗಿದ್ದ ಪ್ರೀತಿ. ಭಾವನೆ ಮತ್ತು ಅನುಭವಗಳ ಶಕ್ತಿಯಿಂದ ವಚನಗಳನ್ನು ಹೂಗಳಂತೆ ಅರಳಿಸಿದ್ದಾರೆ, ಸಮಾಜವನ್ನು ಜೀವಂತ ತೋಟವನ್ನಾಗಿ ಮಾಡಿದರು. ಈ ಜಡ-ದೇಹ ದೇವಾಲಯವಾಗಬೇಕೆಂದರು.

ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯನವರು ಮಾತನಾಡಿ ಅನೇಕ ಸಮಸ್ಯೆಗಳಿಂದ ಕೂಡಿದ ಈ ಲೋಕವನ್ನು ಕೈಲಾಸ ಮಾಡಬೇಕೆಂದು ಬಹಳವಾಗಿ ಬಸವಣ್ಣನವರು ಶ್ರಮಿಸಿದರು. ದೇವತ್ವ ಅನಂತತೆಯುಳ್ಳದ್ದು ಜ್ಞಾನ ಬೆಳವಣಿಗೆಯಲ್ಲಿ ಧ್ಯಾನ ಏಕಾಂತವಾದದ್ದು. ಇಂದ್ರಿಯ ನಿಗ್ರಹಕಷ್ಟ, ಇವನ್ನು ಗೆಲ್ಲಲ್ಲು ಸರಳ ಸಾಹಿತ್ಯದ ಮೂಲಕ ಅನೇಕ ವಚನಗಳನ್ನು ಹೇಳಿದ್ದಾರೆ. ಇದರಿಂದ ಹೊಸ ಸಾಹಿತ್ಯದ ದಿಕ್ಕು ಉದಯವಾಯಿತು.

ಕೊನೆಯಲ್ಲಿ ಶ್ರೀ ಶ್ರೀ ಗಳವರು ಮಾತನಾಡಿ ಬಸವಣ್ಣನವರ ಪ್ರತಿಭೆ ಬಹು ಮುಖವಾದದ್ದು. ಅವರ ಕೊಡುಗೆ ಅಪಾರವಾಗಿದೆ, ಆ ಕಾಲದಲ್ಲಿ ಧರ್ಮ ಸಂಕುಚಿತವಾಗಿತ್ತು. ನರಕವೇ ಪ್ರಾಪ್ತಿ ಎಂದು ಜನತೆ ಪರಿತಪಿಸುತ್ತಿತ್ತು. ವಚನ ಸಂದೇಶಗಳ ಮೂಲಕ ಜಾಗೃತಿ ಉಂಟು ಮಾಡಿದರು. ಇದರಿಂದಾಗಿ ಜನಾಂಗ ನವಚೇತನ ಪಡೆಯಿತು. ವ್ಯಕ್ತಿ ಹುಟ್ಟುವಿಕೆಯಿಂದ ಶ್ರೇಷ್ಠತೆ ಪಡೆಯಲಾರ, ಗುಣಕರ್ಮಗಳಿಂದ ಮಾತ್ರ ಎಂದು ಪ್ರತಿಪಾದಿಸಿದರು.

ಸಂಜೆ ಈ ಕಾರ್ಯಕ್ರಮದ ಅಂಗವಾಗಿ "ಭೂಮಿ ಇಲ್ಲದೆ ಬಂಡಿ ನಡೆಯುವುದೆ" ಎಂಬ ನಾಟಕ ಸಿದ್ಧಗಂಗಾ ಕಲಾವಿದರಿಂದ ಅಭಿನಯಿಸಲಾಯಿತು.

## ಶ್ರೀ ಸೀತಾರಾಮ್ ಜಿಂದಾಲ್,

### ರಾಷ್ಟ್ರೀಯ ಖ್ಯಾತ ಕೈಗಾರಿಕೋದ್ಯಮಿ ಶ್ರೀ ಮಠಕ್ಕೆ ಭೇಟಿ

ದಿನಾಂಕ 16-1-92 ರಂದು ಪೂಜ್ಯ ಶ್ರೀ ಶ್ರೀಗಳವರ ದರ್ಶನಕ್ಕಾಗಿ ಅವರ ಆಪ್ತರೊಂದಿಗೆ ಶ್ರೀ ಸೀತಾರಾಮ್ ಜಿಂದಾಲ್‌ರವರು ಆಗಮಿಸಿದ್ದರು. ಇಲ್ಲಿ ನಡೆಯುತ್ತಿರುವ ಎಲ್ಲಾ ಚಟುವಟಿಕೆಗಳನ್ನು ವೀಕ್ಷಿಸಿದರು. ಸಂಜೆ ವಿದ್ಯಾರ್ಥಿಗಳೊಂದಿಗೆ ಪ್ರಾರ್ಥನೆಯಲ್ಲಿ ಭಾಗವಹಿಸಿ ಮಾತನಾಡುತ್ತ ಭಾರತದ ಯಾವ ಭಾಗದಲ್ಲೂ ಇಂಥಹ ಶಿಕ್ಷಣ ಪ್ರಸಾರದ ಬೃಹತ್ ಮಠ ನೋಡಿಲ್ಲ. ಇಂಥಹ ಸಂಸ್ಥೆ ಕಟ್ಟಿ ನಿರ್ವಹಣೆ ಮಾಡಲು ಪೂಜ್ಯ ಶ್ರೀ ಶ್ರೀ ಗಳವರ ಸಾಧನೆ ಅದ್ವಿತೀಯವಾದುದು. ನೀವುಗಳು ಶ್ರೀ ಶ್ರೀಗಳು ಮತ್ತು ಮಠದ ಬಗ್ಗೆ ಕೃತಜ್ಞತೆ ಉಳ್ಳವರಾಗಿರಬೇಕು, ಶ್ರೀ ಸನ್ನಿಧಿಯಲ್ಲಿ ಪಡೆದ ಉದಾತ್ತ ಭಾವನೆಗಳು ದೇಶ ಸೇವೆಯಲ್ಲಿ ಸ್ಫೂರ್ತಿ ಪಡೆಯುವಂತಾಗಲಿ ಎಂದು ಹಾರೈಸಿದರು. ಶ್ರೀ ಶ್ರೀಗಳ ವಜ್ರಮಹೋತ್ಸವ ಪ್ರತಿಷ್ಠಾನದ ಕಾರ್ಯಯೋಜನೆಗಳಲ್ಲಿ ತಮ್ಮ ನೆರವನ್ನು ನೀಡಲು ತಿಳಿಸಿದರು.

## ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸಮಿತಿ, ಶ್ರೀ ಸಿದ್ಧಗಂಗಾ ಮಠ.

# ವಿನಯ ಮನವಿ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ ತ್ರಿವಿಧ ದಾಸೋಹಿಗಳೂ ಪರಮ ತಪೋಧನರೂ ಆದ ಶಿವಯೋಗಿ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾ ಸ್ವಾಮಿಗಳವರ ಧರ್ಮಪೀಠ ಸ್ವೀಕಾರ ಸಂಸ್ಮರಣಾರ್ಥವಾಗಿ ವಜ್ರಮಹೋತ್ಸವವನ್ನು ಆಚರಿಸುವ ಮಹಾ ಯೋಜನೆಯನ್ನು ಶ್ರೀಮಠದ ಭಕ್ತಾದಿಗಳು ಅಭಿಮಾನಿಗಳು. ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು, ವಿಶ್ವವಿಖ್ಯಾತ ನೇತ್ರದಾನಿ ಪದ್ಮಭೂಷಣ ಡಾ|| ಎಂ. ಸಿ. ಮೋದಿಯವರ ಗೌರವಾಧ್ಯಕ್ಷತೆಯೊಂದಿಗೆ, ಮಾನ್ಯ ಶ್ರೀ ಬಿ.ಎಸ್. ಮುದ್ದಪ್ಪ, ಐ.ಎ.ಎಸ್. (ನಿವೃತ್ತ) ರವರ ಕಾರ್ಯಾಧ್ಯಕ್ಷತೆಯಲ್ಲಿ ರೂಪಿಸಿಕೊಂಡು ಕಾರ್ಯೋನ್ಮುಖವಾಗಿದೆ.

ಇಪ್ಪತ್ತನೆಯ ಶತಮಾನದ ಅಪರೂಪದ ಮಹಾ ವಿಭೂತಿ ಪುರುಷರಾದ ಪರಮ ಪೂಜ್ಯ ಶ್ರೀ ಶ್ರೀಗಳವರು ಅರವತ್ತು ವರ್ಷಗಳಿಂದ ಸರ್ವಸಮಾಜದ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸುತ್ತಿರುವುದು ನಾಡಿನೆಲ್ಲ ಹೃದಯವಂತರಿಗೆ ತಿಳಿದಿರುವ ವಿಚಾರವಾಗಿದೆ. ದೀನ ದಲಿತರ ಅಭಿವೃದ್ಧಿಗಾಗಿ ಪೂಜ್ಯ ಶ್ರೀ ಶ್ರೀ ಗಳವರು ಆಸಕ್ತಿವಹಿಸಿ ಗ್ರಾಮೀಣ ಬಂಧುಗಳ ಏಳ್ಗೆಯನ್ನು ಗಮನದಲ್ಲಿಟ್ಟುಕೊಂಡು ಸಲ್ಲಿಸುತ್ತ ಬಂದಿರುವ ನಿಷ್ಕಾಮ ಸೇವೆ ಅತ್ಯಂತ ಶ್ಲಾಘನೀಯವಾದುದು. "ಸೇವೆಯೇ ಶಿವ ಯೋಗ, ಕಾಯಕವೇ ಲಿಂಗಪೂಜೆ, ದಾಸೋಹವೇ ಮಾನವೀಯತೆ" ಎಂಬುದನ್ನು ಆಚರಿಸಿ ತೋರಿಸುತ್ತ ನಡೆದಿರುವ ಶಿವಯೋಗಿಗಳಿಗೆ ಕೃತಜ್ಞತಾ ಪೂರ್ವಕವಾಗಿ ಭಕ್ತಿ ನಮನಗಳನ್ನು ಸಲ್ಲಿಸಲು ಇದೊಂದು ಸುವರ್ಣಾವಕಾಶ.

ವಜ್ರಮಹೋತ್ಸವದ ಸಂಸ್ಮರಣಾರ್ಥವಾಗಿ ಶ್ರೀಮಠದಲ್ಲಿ ಅತ್ಯಂತ ವಿಶಾಲ ವಾದ 150 ಕೊಠಡಿಗಳನ್ನೊಳಗೊಂಡ ಬೃಹತ್ ವಿದ್ಯಾರ್ಥಿನಿಲಯವನ್ನು ಹಾಗೂ ಎರಡುಸಾವಿರ ಮಂದಿ ಕೂತು ಏಕ ಕಾಲದಲ್ಲಿ ಪ್ರಸಾದ ಸ್ವೀಕರಿಸುವಂಥ ಸುವಿಶಾಲ ಸುಸಜ್ಜಿತ ನೈರ್ಮಲ್ಯ ಪೂರ್ಣ ಪ್ರಸಾದನಿಲಯವನ್ನು ನಿರ್ಮಿಸುವ ಮತ್ತು ಶ್ರೀಮಠದ ಪರಿಸರ ಪರಿಶುದ್ಧವಾಗಿರುವಂತಹ ನೈರ್ಮಲ್ಯ ವ್ಯವಸ್ಥೆಯನ್ನು ರೂಪಿಸುವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

(4ನೇ ರಕ್ಷಾ ಪುಟ ನೋಡಿ)

[3 ನೇ ರಕ್ಷಾಪುಟದಿಂದ ಮುಂದುವರೆದಿದೆ]

ಈಗಾಗಲೇ ಅನೇಕ ಮಹನೀಯರು ಉದಾರವಾಗಿ ಯೋಜನೆಗಳನ್ನು ಬೆಂಬಲಿಸಿ ದಾನ ಮಾಡಲು ಮುಂದೆ ಬಂದಿದ್ದು 125 ಕೊಠಡಿಗಳಿಗೆ ವಾಗ್ದಾನ ಮಾಡಿರುವುದಲ್ಲದೆ ಕಾಣಿಕೆಯನ್ನು ನೀಡಿರುತ್ತಾರೆ. ಪ್ರಸಾದನಿಲಯದ ನಿರ್ಮಾಣಕ್ಕೂ ಸಹಾಯ ಮಾಡಿರುತ್ತಾರೆ. ಈ ಸುಸಂದರ್ಭದಲ್ಲಿ ಶ್ರೀಮಠದ ಭಕ್ತಾದಿಗಳಾದ ತಮ್ಮಲ್ಲಿ ಪ್ರಾರ್ಥಿಸುವುದೇನೆಂದರೆ ತಾವು ಈ ವಜ್ರಮಹೋತ್ಸವ ಪುಣ್ಯ ಮಣಿಹದಲ್ಲಿ ಉದಾರವಾಗಿ ಕಾಣಿಕೆ ಅರ್ಪಿಸುವುದರ ಮೂಲಕ "**ವಜ್ರಮಹೋತ್ಸವ**" ಅಮೋಘವಾಗಿ ನಡೆಯಲು ಸಹಕಾರ ನೀಡುವಿರೆಂದು ನಂಬಿರುತ್ತೇವೆ.

ನಿಯೋಜಿತ ವಿದ್ಯಾರ್ಥಿ ನಿಲಯದ ಒಂದು ಕೊಠಡಿ ಕಟ್ಟಿಸಿಕೊಡುವವರ ಹೆಸರನ್ನು ಕೊಠಡಿಗೆ ಇಡಲಾಗುತ್ತೆ. ಅದಕ್ಕೆ ತಗಲುವ ಅಂದಾಜು ಮೊಬಲಗು 35,000ರೂಗಳು. ಆರು ಕೊಠಡಿಯ 'ಬ್ಲಾಕ್' ಕಟ್ಟಿಸಿಕೊಡುವವರ ಹೆಸರನ್ನು ಇಡೀಬ್ಲಾಕ್‌ಗೆ ಇಡಲಾಗುತ್ತದೆ.

ಪ್ರಸಾದ ನಿಲಯಕ್ಕೆ ಸಹಾಯ ಮಾಡುವವರ ಹೆಸರನ್ನು ನಿಲಯದ ಶಿಲಾ ಫಲಕದಲ್ಲಿ ಬರೆಸಲಾಗುತ್ತದೆ

ದಯಮಾಡಿ ತಮ್ಮ ವಂತಿಕೆಯನ್ನು ಈ ಪುಣ್ಯ ಕಾರ್ಯಕ್ಕೆ ವಿನಿಯೋಗಿಸಬೇಕಾಗಿ ಪ್ರಾರ್ಥಿಸುತ್ತೇವೆ.

**ಆದಾಯ ತೆರಿಗೆ ರಿಯಾಯತಿ :–**

ಸರ್ಕಾರ ವಜ್ರಮಹೋತ್ಸವ ನಿಧಿಗೆ ಹಣ ಸಂದಾಯ ಮಾಡುವವರಿಗೆ ಶೇ. 50 ರಷ್ಟುತೆರಿಗೆ ರಿಯಾಯಿತಿ ನೀಡಿರುತ್ತದೆ. ವಜ್ರಮಹೋತ್ಸವಕ್ಕೆ ನಿಧಿ ಸಂಗ್ರಹಣೆಗಾಗಿ ವಿವಿಧ ಮೊತ್ತದ ಟಿಕೆಟ್ಟುಗಳನ್ನು ಸಿದ್ಧ ಪಡಿಸಲಾಗಿದೆ. ಶ್ರೀ ಮಠದ ಭಕ್ತಾದಿಗಳು, ಹಿತೈಷಿಗಳು ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗಳ ಮುಖ್ಯಸ್ಥರು ಟಿಕೆಟ್‌ಗಳನ್ನು ಪಡೆದು ನಿಧಿ ಸಂಗ್ರಹಣೆಯಲ್ಲಿ ತೊಡಗಬೇಕೆಂದು ಕೋರುತ್ತೇವೆ.

ಪರಮಪೂಜ್ಯ ಶ್ರೀ ಶ್ರೀಗಳವರ ಸೇವಾಮಣಿಹಕ್ಕೆ ನಾವೆಲ್ಲ ನೀಡಬಹುದಾದ ಭಕ್ತಿ ಕಾಣಿಕೆಗೆ ಇದೊಂದು ಅಪೂರ್ವ ಅವಕಾಶವಾಗಿದೆ.

**ಶರಣಾರ್ಥಿಗಳು**

**ಪದ್ಮಭೂಷಣ**

**ಡಾ|| ಎಂ.ಸಿ. ಮೋದಿಯವರು,** ಗೌರವಾಧ್ಯಕ್ಷರು,

**ಶ್ರೀ ಬಿ ಎಸ್. ಮುದ್ದಪ್ಪನವರು,** ಐ.ಎ.ಎಸ್. (ನಿವೃತ್ತ) ಕಾರ್ಯಾಧ್ಯಕ್ಷರು,

**ಶ್ರೀ ಎಸ್. ಎಸ್. ಹಸಬಿಯವರು,** ಐ.ಪಿ ಎಸ್. (ನಿವೃತ್ತ) ಕಾರ್ಯದರ್ಶಿಗಳು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,